**SHAKUNA PHALAGALU**
By Vidwan K. Chandrashekar
Published by **Sri Ganesha Prakasana**
No. 9, 1st Floor, J. M. Lane
Balepet, Bangalore- 560 053.
Phone : 2254219

ಕೃತಿಯ ಹೆಸರು : ಶಕುನ ಫಲಗಳು

ಲೇಖಕರು : ವಿದ್ವಾನ್ ಕೆ. ಚಂದ್ರಶೇಖರ್

ಮೊದಲ ಮುದ್ರಣ : 1996

ಎರಡನೆ ಮುದ್ರಣ : 1998

ಮೂರನೆ ಮುದ್ರಣ : 2000

ನಾಲ್ಕನೆ ಮುದ್ರಣ : 2002



ಪುಟಗಳು : 48

ಬೆಲೆ : ರೂ. **8.00**

ಅಕ್ಷರ ಜೋಡಣೆ :
**ಗಣೇಶ್ ಗ್ರಾಫಿಕ್ಸ್**
ಬಳೇಪೇಟೆ, ಬೆಂಗಳೂರು - 560 053.
ಫೋನ್: 2254 219

ಮುದ್ರಕರು :
**ಪ್ರಸಾದ್ ಪ್ರಿಂಟರ್ಸ್**
ಬೆಂಗಳೂರು.

# ಶುಭ ಶಕುನಗಳು

1. **ಮನೆಯಿಂದ ಹೊರಡುವಾಗ ವಾದ್ಯಗಳು ಮೊಳಗಿದ ಶಬ್ದ ಕೇಳಿ ಬಂದರೆ :**

ಶುಭ ವಾರ್ತೆ ಲಭ್ಯವಾಗುವುದು. ಅನಿರೀಕ್ಷಿತ ಧನಲಾಭ ಉಂಟಾಗು ವುದು. ಶತ್ರುಗಳು ಮಿತ್ರರಾಗುವರು. ಆರೋಗ್ಯ ಸುಧಾರಿಸುವುದು. ರಾಜಕಾರಣಿಗಳಿಗೆ, ಸರ್ಕಾರಿ ನೌಕರರಿಗೆ ಬಡ್ತಿ ದೊರೆಯುವುದು. ವ್ಯಾಪಾರಿಗಳಿಗೆ ಹೇರಳ ಲಾಭ ದೊರೆಯುವುದು.

2. **ಮನೆಯಿಂದ ಹೊರಡುವಾಗ ಹಣ್ಣು ಮಾರುವವರು ಎದುರಾದರೆ :**

ನಿಶ್ಚಯಿಸಿಕೊಂಡ ಕಾರ್ಯ ಕೈಗೂಡುವುದು. ಆಸ್ತಿಲಾಭ ಉಂಟಾಗುವುದು. ಹೋದ ಕಡೆ ವಿಶೇಷ ಗೌರವ ದೊರೆಯುವುದು. ಕೋರ್ಟಿನ ವ್ಯವಹಾರದಲ್ಲಿ ಗೆಲುವು ದೊರೆಯುವುದು. ಪರೀಕ್ಷೆಯಲ್ಲಿ ಪಾಸಾಗುವುದು. ವ್ಯಾಪಾರಿಗಳಿಗೆ ವಿಶೇಷ ಲಾಭ ಉಂಟಾಗುವುದು. ಕಾರ್ಮಿಕರಿಗೆ ಧನಲಾಭವಾಗುವುದು.

3. **ಮನೆಯಿಂದ ಹೊರಡುವಾಗ ಹೂವು ಮಾರುವವರು ಎದುರಾದರೆ :**

ವಿಶೇಷ ಕೀರ್ತಿ ದೊರೆಯುವುದು. ರೋಗನಿವಾರಣೆಯಾಗುವುದು. ಸಂತೋಷ ವಾರ್ತೆ ಕೇಳಲು ದೊರೆಯುವುದು. ಬಯಕೆಗಳು ಈಡೇರು ವುದು. ಕೋರ್ಟು ವ್ಯವಹಾರದಲ್ಲಿ ಜಯ ದೊರಕುವುದು. ವ್ಯಾಪಾರಿ ಗಳಿಗೆ ಹೆಚ್ಚು ಲಾಭ ದೊರೆಯುವುದು.

4. **ಮನೆಯಿಂದ ಹೊರಡುವಾಗ ಮುತ್ತೈದೆಯರು ಎದುರಾದರೆ :**

ಲಾಟರಿಯಲ್ಲಿ ಹಣ ದೊರಕುವುದು. ಜೂಜಿನಲ್ಲಿ ಗೆಲುವು ದೊರಕು ವುದು. ಸಂಬಂಧಿಕರಿಂದ ಧನಸಹಾಯ ದೊರೆಯುವುದು. ಹಳೆಯ ರೋಗ ನಿವಾರಣೆಯಾಗುವುದು. ಭೋಗವಸ್ತು ವ್ಯಾಪಾರಿಗಳಿಗೆ, ಡಾಕ್ಟರ್‌ಗಳಿಗೆ ವಿಶೇಷ ಧನಲಾಭ ಉಂಟಾಗುವುದು.

**5. ಮನೆಯಿಂದ ಹೊರಡುವಾಗ ವೇಶ್ಯೆಯರು ಎದುರಾದರೆ :**

ಕಲಾವಿದರಿಗೆ, ರಾಜಕಾರಣಿಗಳಿಗೆ ವಿಶೇಷ ಮರ್ಯಾದೆ, ಕೀರ್ತಿ ದೊರೆಯುವುದು. ವ್ಯಾಪಾರಿಗಳಿಗೆ ವ್ಯಾಪಾರ ಚೆನ್ನಾಗಿ ನಡೆಯುವುದು. ಮನ ಮೆಚ್ಚುವ ಸುಂದರ ಪತ್ನಿ ದೊರೆಯುವಳು. ಆರೋಗ್ಯ ಉತ್ತಮಗೊಳ್ಳುವುದು. ದಾಂಪತ್ಯ ಜೀವನ ಸುಖಮಯವಾಗುವುದು.

**6. ಮನೆಯಿಂದ ಹೊರಡುವಾಗ ಕನ್ಯೆಯರು ಎದುರಾದರೆ :**

ನೆನೆಸಿರುವ ಕಾರ್ಯ ಸುಲಭವಾಗಿ ಕೈಗೂಡುವುದು. ಸಂತೋಷವಾರ್ತೆ ಕೇಳಲು ದೊರೆಯುವುದು. ಉತ್ತಮ ಮಿತ್ರರು ಲಭಿಸುವರು. ವಿಶೇಷವಾಗಿ ಸ್ತ್ರೀಯರಿಂದ ಧನಲಾಭ ಉಂಟಾಗುವುದು. ಆದಾಯದಲ್ಲಿ ಹೆಚ್ಚಳ ಉಂಟಾಗುವುದು. ಆಸ್ತಿ ಲಾಭವಾಗುವುದು.

**7. ಮನೆಯಿಂದ ಹೊರಡುವಾಗ ಬಿಳಿ ಅನ್ನ ಕಾಣಿಸಿದರೆ :**

ಶುಭ ಸಮಾಚಾರ ಕೇಳಲು ದೊರೆಯುವುದು. ಆಭರಣ ಲಾಭವಾಗುವುದು. ಸಂತಾನ ಭಾಗ್ಯ ಉಂಟಾಗುವುದು. ಬರಹಗಾರರಿಗೆ ಜನ ಮನ್ನಣೆ ದೊರೆಯುವುದು. ಜೂಜಿನಲ್ಲಿ ವಿಶೇಷ ಲಾಭ ಉಂಟಾಗುವುದು. ದಿನಸಿ ವ್ಯಾಪಾರಿಗಳಿಗೆ, ಬಟ್ಟೆ ವ್ಯಾಪಾರಿಗಳಿಗೆ ಹೇರಳ ಲಾಭ ದೊರಕುವುದು.

**8. ಮನೆಯಿಂದ ಹೊರಡುವಾಗ ಪರಮಾನ್ನ ಕಾಣಿಸಿದರೆ :**

ಬಂಧುಗಳ ಮನೆಯಲ್ಲಿ ಮೃಷ್ಟಾನ್ನ ಭೋಜನ ದೊರೆಯುವುದು. ದಿನಸಿ ವ್ಯಾಪಾರಿಗಳಿಗೆ ಬಹಳ ಲಾಭ ದೊರೆಯುವುದು. ವಿವಾಹ ಯೋಗ ಲಭಿಸುವುದು. ಕೋರ್ಟಿನಲ್ಲಿ ಜಯ ದೊರಕುವುದು. ಪರೀಕ್ಷಾ ಫಲಿತಾಂಶ ಸಂತೋಷದಾಯಕವಾಗುವುದು. ಸರ್ಕಾರಿ ಕೆಲಸಗಾರರಿಗೆ ಪ್ರಶಂಸೆ ದೊರಕುವುದು. ಹಳೆಯ ಖಾಯಿಲೆಗಳು ಗುಣವಾಗುವುವು.

**9. ಮನೆಯಿಂದ ಹೊರಡುವಾಗ ಆನೆ ಎದುರಾದರೆ :**

ಶತ್ರುಗಳು ದೂರ ಸರಿಯುವರು. ಸಂತೋಷ ವಾರ್ತೆ ಕೇಳಲು ಲಭಿಸುವುದು. ಎಲ್ಲಾ ಕೆಲಸಗಳಲ್ಲೂ ಜಯ ದೊರೆತು, ಜನಮನ್ನಣೆ,

ಉನ್ನತ ಸ್ಥಾನಗಳು ಲಭಿಸುವುವು. ಎಲ್ಲಾ ಕಡೆಯಿಂದಲೂ ಗೌರವ ದೊರೆಯುವುದು. ಭೂ ವ್ಯವಹಾರದಲ್ಲಿ ಲಾಭ ದೊರೆಯುವುದು.

**10. ಮನೆಯಿಂದ ಹೊರಡುವಾಗ ಕುದುರೆ ಎದುರಾದರೆ :**

ಪ್ರವಾಸ ಮಾಡುವ ಅವಕಾಶ ದೊರೆಯುವುದು. ಬರಹಗಾರರಿಗೆ, ದಿನಸಿ ವ್ಯಾಪಾರಿಗಳಿಗೆ, ಪೆಟ್ರೋಲ್, ಎಣ್ಣೆ ವ್ಯಾಪಾರಿಗಳಿಗೆ, ಕಾರ್ಮಿಕರಿಗೆ, ಡಾಕ್ಟರ್, ಇಂಜಿನಿಯರ್‌ಗಳಿಗೆ ರೇಷ್ಮೆ, ಬೆಳ್ಳಿ, ಬಂಗಾರ ವ್ಯಾಪಾರಿಗಳಿಗೆ ಹೇರಳ ಲಾಭ ದೊರೆಯುವುದು. ಶುಭ ಕಾರ್ಯಗಳಿಗೆ ನಿರಾತಂಕವಾಗಿ ನೆರವೇರುವುವು.

**11. ಮನೆಯಿಂದ ಹೊರಡುವಾಗ 'ಎತ್ತು' ಎದುರಾದರೆ :**

ಪ್ರಯತ್ನಿಸಿದ ಕಾರ್ಯಗಳಲ್ಲಿ ಜಯ ದೊರಕುವುದು. ಪ್ರೇಮಿಗಳಿಗೆ ವಿವಾಹ ಯೋಗ ಕೂಡಿಬರುವುದು. ಮಕ್ಕಳಿಗೆ ಲಾಭ ಉಂಟಾಗುವುದು. ಶತ್ರುಗಳು ದೂರ ಸರಿಯುವರು. ವ್ಯಾಪಾರಿಗಳಿಗೆ ವಿಶೇಷ ಲಾಭ ಉಂಟಾಗುವುದು.

**12. ಮನೆಯಿಂದ ಹೊರಡುವಾಗ ಹಾಲು ತುಂಬಿದ ಪಾತ್ರೆ ಕಾಣಿಸಿದರೆ:**

ಮನದ ಬಯಕೆಗಳು ಈಡೇರುವುವು. ಗೌರವ, ಕೀರ್ತಿ ಲಭಿಸುವುದು. ರಾಜಕೀಯ ವ್ಯಕ್ತಿಗಳಿಗೆ ಮಂತ್ರಿ ಪದವಿ ದೊರೆಯುವುದು. ಪ್ರಯತ್ನಿಸಿದ ಕಾರ್ಯದಲ್ಲಿ ಜಯ ದೊರಕುವುದು. ಮನೆಯಲ್ಲಿ ಶುಭ ಸಮಾರಂಭಗಳು ನಡೆಯುವ ಸೂಚನೆಗಳಿರುತ್ತವೆ.

**13. ಮನೆಯಿಂದ ಹೊರಡುವಾಗ ಮೊಸರು ತುಂಬಿದ ಪಾತ್ರೆ ಎದುರಾದರೆ :**

ಭೋಗ ವಸ್ತುಗಳಿಂದ ಹಣ ಲಾಭವಾಗುವುದು. ರೋಗಗಳು ನಿವಾರಣೆಯಾಗುವುವು. ಪ್ರಯತ್ನಿಸಿದ ಕಾರ್ಯದಲ್ಲಿ ಜಯ ದೊರಕುವುದು. ಉನ್ನತ ಹುದ್ದೆಗೆ ಬಡ್ತಿ ದೊರೆಯುವುದು. ಆಸ್ತಿ ಲಾಭವಾಗುವುದು. ಕಲಾವಿದರಿಗೆ ಜನಮನ್ನಣೆ ದೊರೆಯುವುದು.

**14. ಮನೆಯಿಂದ ಹೊರಡುವಾಗ ಬೆಂಕಿ ಎದುರಾದರೆ :**

ಸುಖ ಪ್ರವಾಸ ಮಾಡುವ ಸಂದರ್ಭ ಒದಗಿಬರುವುದು. ಶುಭವಾರ್ತೆ ಕೇಳಲು ದೊರೆಯುವುದು. ವಿದ್ಯಾರ್ಥಿಗಳು ವಿದ್ಯೆಯಲ್ಲಿ ಮನ್ನಣೆ ಪಡೆಯುವರು. ವ್ಯಾಪಾರಿಗಳಿಗೆ ವಿಶೇಷ ಧನಲಾಭವಾಗುವುದು. ಹೊಳೆಯ ರೋಗಗಳು ಗುಣವಾಗುವುವು.

**15. ಮನೆಯಿಂದ ಹೊರಡುವಾಗ ನೀರು ತುಂಬಿದ ಪಾತ್ರೆ ಎದುರಾದರೆ :**

ಶತ್ರುಗಳು ಮಿತ್ರರಾಗುವರು. ಎಲ್ಲಾ ಕೆಲಸ ಕಾರ್ಯಗಳಲ್ಲಿ ಜಯ ಉಂಟಾಗುವುದು. ಲಾಟರಿಯಲ್ಲಿ ಬಹುಮಾನ ದೊರೆಯುವುದು. ಜನಮನ್ನಣೆ ದೊರೆಯುವುದು. ಬಯಕೆಗಳು ಈಡೇರಿ ಗೌರವ ಕೀರ್ತಿ ದೊರೆಯುವುದು.

**16. ಮನೆಯಿಂದ ಹೊರಡುವಾಗ ಮದ್ಯ (ಹೆಂಡ) ಕಾಣಿಸಿದರೆ :**

ಸಕಲ ಕಾರ್ಯಗಳು ಕೈಗೂಡುವುದು. ಗೌರವ ಕೀರ್ತಿ ಲಭಿಸುವುದು. ಶತ್ರುಗಳು ಮಿತ್ರರಾಗುವರು. ಭೂ ವ್ಯವಹಾರದಿಂದ ಲಾಭ ದೊರಕುವುದು. ರೋಗ ನಿವಾರಣೆಯಾಗುವುದು. ಪ್ರಯಾಣದಿಂದ ಲಾಭ ದೊರಕುವುದು.

**17. ಮನೆಯಿಂದ ಹೊರಡುವಾಗ ಬಳೆ ಮಾರುವವರು ಎದುರಾದರೆ :**

ಶುಭ ವಾರ್ತೆ ಕೇಳಲು ದೊರಕುವುದು. ಶುಭ ಕಾರ್ಯಗಳು ಕೈಗೂಡುವುದು. ವಿದ್ಯಾರ್ಥಿಗಳಿಗೆ ವಿದ್ಯೆಯಯಲ್ಲಿ ಪ್ರಗತಿ ಉಂಟಾಗುವುದು. ವಿವಾಹಯೋಗ ಉಂಟಾಗುವುದು. ವ್ಯಾಪಾರ ಅಭಿವೃದ್ಧಿಯಾಗುವುದು. ಸ್ನೇಹಿತರಿಂದ ಲಾಭವಾಗುವುದು.

**18. ಮನೆಯಿಂದ ಹೊರಡುವಾಗ ಅರಿಶಿನ ಕಾಣಿಸಿದರೆ:**

ಮನೆಯಲ್ಲಿ ಮಂಗಳ ಕಾರ್ಯಗಳು ಜರುಗುವುದು. ಪ್ರಕಟಕರಿಗೆ ಬರಹಗಾರರಿಗೆ, ಚಲನಚಿತ್ರ ನಟನಟಿಯರಿಗೆ, ಭೋಗವಸ್ತು ವ್ಯಾಪಾರಿಗಳಿಗೆ ಲಾಭದಾಯಕವಾಗಿರುವುದು. ಹುದ್ದೆಯಲ್ಲಿ ಬಡ್ತಿ ದೊರೆಯುವುದು.

**19. ಮನೆಯಿಂದ ಹೊರಡುವಾಗ ಗಂಧ ಎದುರಾದರೆ :**

ಕೀರ್ತಿ, ಗೌರವ ದೊರಕುವುದು. ವ್ಯಾಪಾರದಲ್ಲಿ ಹೇರಳ ಲಾಭ ದೊರಕುವುದು. ಉಡುಗೊರೆ ದೊರಕುವುದು. ವೃತ್ತಿಯಲ್ಲಿ ಬಡ್ತಿ ದೊರೆಯುವುದು. ಆಸ್ತಿ ಲಾಭವಾಗುವ ಯೋಗ ದೊರಕುವುದು.

**20. ಮನೆಯಿಂದ ಹೊರಡುವಾಗ ಒಬ್ಬ ಕ್ಷತ್ರಿಯ ಎದುರಾದರೆ :**

ಸ್ಪರ್ಧೆಯಲ್ಲಿ ಜಯ ದೊರಕುವುದು. ಕೋರ್ಟ್ ವ್ಯವಹಾರಗಳಲ್ಲಿ ಜಯ ಸಿಗುವುದು. ಬಯಕೆಗಳು ಈಡೇರುವುದು. ಗೌರವ, ಕೀರ್ತಿ ಲಭಿಸುವುದು. ಭೋಗವಸ್ತುಗಳಿಂದ ಹೆಚ್ಚು ಆದಾಯ ದೊರಕುವುದು. ಆರೋಗ್ಯ ಸುಧಾರಣೆಯಾಗುವುದು. ಬಂಧುಗಳಿಂದ ಸಂತಸ ದೊರಕುವುದು, ಸ್ವಂತ ಉದ್ದಿಮೆಯಲ್ಲಿ ಸಫಲತೆ ದೊರಕುವುದು. ಸರ್ಕಾರಿ ನೌಕರರಿಗೆ ಕೀರ್ತಿ, ಗೌರವ ಲಭಿಸುವುದು.

**21. ಮನೆಯಿಂದ ಹೊರಡುವಾಗ ಇಬ್ಬರು ಬ್ರಾಹ್ಮಣರೆದುರಾದರೆ :**

ಮನೆಯಲ್ಲಿ ಶುಭ ಸಮಾರಂಭಗಳು ಜರುಗುವವು. ವಿವಾಹಯೋಗ ಉಂಟಾಗುವುದು. ಉತ್ತಮ ಆರೋಗ್ಯ ಲಭಿಸುವುದು. ಜೀವನದ ಸುಖ ಸಾಧನಗಳು ಲಭಿಸುವುದು. ವ್ಯಾಪಾರದಲ್ಲಿ ಅಪಾರ ಲಾಭ ದೊರಕುವುದು. ಉಡುಗೊರೆಗಳು ದೊರಕುವವು. ಕೋರ್ಟ್ ವ್ಯವಹಾರಗಳಲ್ಲಿ ಜಯ ದೊರಕುವುದು.

**22. ಮನೆಯಿಂದ ಹೊರಡುವಾಗ 4 ಜನ ವೈಶ್ಯರು ಎದುರಾದರೆ :**

ಬಂಗಾರದ ಆಭರಣಗಳು ದೊರಕುವುದು. ಎಲ್ಲಾ ವ್ಯಾಪಾರದಲ್ಲಿ ಹೆಚ್ಚು ಲಾಭ ಬರುವುದು. ಕಾರ್ಯಗಳು ಕೈಗೂಡುವವು. ಧನಲಾಭ ಆಗುವುದು. ಜೂಜು ಮತ್ತು ಲಾಟರಿಯಲ್ಲಿ ಜಯ ದೊರಕುವುದು. ಪತ್ನಿಯಿಂದ ಆಸ್ತಿ ಲಾಭವಾಗುವುದು. ಅವಿವಾಹಿತರಿಗೆ ವಿವಾಹಯೋಗ ಉಂಟಾಗುವುದು.

**23. ಮನೆಯಿಂದ ಹೊರಡುವಾಗ ಕೋಲು ಹಿಡಿದ ಹರಿಜನರು ಎದುರಾದರೆ :**

ಸರ್ಕಾರಿ ಕೆಲಸಗಳಲ್ಲಿ ಬಡ್ತಿ ದೊರೆಯುವುದು. ಶುಭ ವಾರ್ತೆಗಳು

ಕೇಳಲು ದೊರಕುವುದು. ರೋಗಗಳು ನಿವಾರಣೆಯಾಗುವುದು. ಜೂಜಿನಲ್ಲಿ ಜಯ ಉಂಟಾಗುವುದು. ಕೋರ್ಟ್ ವ್ಯವಹಾರಗಳಿಗೆ ಜಯ ದೊರಕುವುದು. ವ್ಯಾಪಾರಿಗಳಿಗೆ ಅಪಾರ ಲಾಭ ದೊರೆಯುವುದು. ಅವಿವಾಹಿತರಿಗೆ ವಿವಾಹ ಯೋಗ ಉಂಟಾಗುವುದು. ಭೋಗ ವಸ್ತುಗಳು ದೊರಕುವುವು. ಆಸ್ತಿಲಾಭ, ಧನಲಾಭ ಉಂಟಾಗುವುದು. ಮಿತ್ರರಿಂದ ಲಾಭ ದೊರೆಯುವುದು. ಅಪಾರ ಕೀರ್ತಿ ಗೌರವ ದೊರಕುವುದು.

**24. ಮನೆಯಿಂದ ಹೊರಡುವಾಗ ಮಾಂಸ ಎದುರಾದರೆ :**

ಮನೆಯಲ್ಲಿ ಶುಭ ಸಮಾರಂಭಗಳು ನಡೆಯುವುವು. ಸಮಾಜದಲ್ಲಿ ಗೌರವ ಸ್ಥಾನ ದೊರೆತು ಉತ್ತಮ ಜೀವನಕ್ಕೆ ದಾರಿಯಾಗುವುದು. ಶತ್ರುಗಳು ಮಿತ್ರರಾಗುವರು. ಕೋರ್ಟ್ ವ್ಯವಹಾರದಲ್ಲಿ ಜಯ ದೊರಕುವುದು. ಅಧಿಕಾರದಲ್ಲಿ ಬಡ್ತಿ ದೊರೆಯುವುದು. ಸಂಬಂಧಿಕರಿಂದ ಧನಲಾಭವಾಗುವುದು. ಕಲಾವಿದರಿಗೆ, ಬರಹಗಾರರಿಗೆ, ಸಿನಿಮಾ ನಟ ನಟಿಯರಿಗೆ ಲಾಭದಾಯಕವಾಗುವುದು.

**25. ಮನೆಯಿಂದ ಹೊರಡುವಾಗ ಕೊಡೆ ಎದುರಾದರೆ :**

ಸಮಾಜದಲ್ಲಿ ಕೀರ್ತಿ, ಗೌರವ ಹೆಚ್ಚಾಗುವುದು. ಆದಾಯ ಹೆಚ್ಚುವುದು. ಹುದ್ದೆಯಲ್ಲಿ ಬಡ್ತಿ ದೊರೆಯುವುದು. ಹಣ ಮತ್ತು ಆಸ್ತಿ ದೊರೆಯುವುದು. ಭೋಗ ವಸ್ತುಗಳು ಮತ್ತು ವಾಹನ ಲಾಭವಾಗುವುದು. ಪ್ರೇಮಿಗಳಿಗೆ ವಿವಾಹಯೋಗ ಉಂಟಾಗುವುದು. ಪ್ರಯತ್ನಿಸಿದ ಕಾರ್ಯದಲ್ಲಿ ಜಯ ಕಂಡುಬರುವುದು. ಗೃಹದಲ್ಲಿ ಶುಭ ಸಮಾರಂಭಗಳು ಜರುಗುವುದು. ರೇಷ್ಮೆ, ಬೆಳ್ಳಿ, ಬಂಗಾರ, ಲಾಟರಿ, ಸಟ್ಟಾ, ಜೂಜು, ಭೋಗವಸ್ತು ವ್ಯಾಪಾರಿಗಳಿಗೆ ಹೇರಳ ಲಾಭ ಸಿಗುವುದು.

**26. ಮನೆಯಿಂದ ಹೊರಡುವಾಗ ಬೀಸಣಿಗೆ ಮಾರುವವರು ಎದುರಾದರೆ:**

ಉತ್ತಮ ಮಿತ್ರರು ಲಭಿಸುವರು. ಸಂತಾನಭಾಗ್ಯ ಉಂಟಾಗುವುದು. ಹೊಸ ಕೆಲಸದಲ್ಲಿ ಗೌರವ ಪ್ರಾಪ್ತಿಯಾಗುವುದು. ಅವಿವಾಹಿತರಿಗೆ

ವಿವಾಹ ಯೋಗ ಉಂಟಾಗುವುದು. ವ್ಯಾಪಾರಿಗಳಿಗೆ ಹೆಚ್ಚು ಲಾಭ ದೊರೆಯುವುದು. ಪತ್ನಿಯಿಂದ ಲಾಭವಾಗುವುದು. ಮೃಷ್ಟಾನ್ನ ಭೋಜನ ದೊರಕುವುದು. ಭೋಗವಸ್ತು ವ್ಯಾಪಾರಿಗಳಿಗೆ ಹೇರಳ ಲಾಭ ದೊರಕುವುದು. ರಾಜಕಾರಣಿಗಳಿಗೆ, ಸರ್ಕಾರಿ ನೌಕರರಿಗೆ ಗೌರವ, ಕೀರ್ತಿ ಲಭಿಸುವುದು. ರೋಗ ನಿವಾರಣೆಯಾಗುವುದು.

**27. ಮನೆಯಿಂದ ಹೊರಡುವಾಗ ಮಡಿವಾಳರ ಬಟ್ಟೆಗಳು ಎದುರಾದರೆ :**

ಬಯಕೆಗಳು ಸುಲಭವಾಗಿ ಈಡೇರುವವು. ಗೌರವ, ಕೀರ್ತಿ ಲಭಿಸುವುದು. ಪ್ರಯತ್ನಿಸಿದ ಕಾರ್ಯದಲ್ಲಿ ಜಯ ಉಂಟಾಗುವುದು. ವಾಹನ ಲಾಭವಾಗುವುದು. ಕೆಲವರಿಗೆ ವಿವಾಹಯೋಗ ಮತ್ತು ಸಂತಾನಯೋಗ ಲಭಿಸುವುದು. ಸಹೋದರ ಸಹೋದರಿಯರಿಂದ ಧನಲಾಭವಾಗುವುದು. ಮನೆಯಲ್ಲಿ ಮಂಗಳ ಕಾರ್ಯಗಳು ಜರುಗುವುದು. ಶತ್ರುಗಳು ಮಿತ್ರರಾಗುವರು.

**28. ನಾಯಿಯು ಚರ್ಮದ ಚೂರನ್ನು ಬಾಯಿಯಲ್ಲಿ ಕಚ್ಚಿಕೊಂಡು ಬಳಿಗೆ ಬಂದರೆ :**

ನೆನೆಸಿದ ಕಾರ್ಯಗಳು ಶೀಘ್ರವೇ ನೆರವೇರುವುವು. ಮನೆಯಲ್ಲಿ ಶುಭ ಸಮಾರಂಭಗಳು ಜರುಗುವುದು. ಕೋರ್ಟಿನ ವ್ಯವಹಾರದಲ್ಲಿ ಜಯ ದೊರಕುವುದು. ಹತ್ತಿರದ ಸಂಬಂಧಿಗಳಿಂದ ಧನಲಾಭವಾಗುವುದು. ದಿನಸಿ ವ್ಯಾಪಾರಿಗಳಿಗೆ, ಚಿನ್ನ, ಬೆಳ್ಳಿ ವ್ಯಾಪಾರಿಗಳಿಗೆ, ಬರಹಗಾರರಿಗೆ, ಪ್ರಕಾಶಕರಿಗೆ ಹೆಚ್ಚು ಲಾಭ ದೊರೆಯುವುದು. ಭೋಗವಸ್ತುಗಳಿಂದ ಹಣ ದೊರಕುವುದು. ಗೌರವ ಕೀರ್ತಿ ಲಭಿಸುವುದು.

**29. ನಾಯಿಯು ಮಾಂಸದ ಚೂರನ್ನು ಬಾಯಿಯಲ್ಲಿ ಕಚ್ಚಿಕೊಂಡು ಬಳಿಗೆ ಬಂದರೆ :**

ಶತ್ರುಗಳು ಮಿತ್ರರಾಗುವರು. ಹುದ್ದೆಯಲ್ಲಿ ಬಡ್ತಿ ದೊರೆಯುವುದು. ಸ್ವಂತ ಉದ್ದಿಮೆದಾರರಿಗೆ ಹೇರಳ ಲಾಭ ದೊರೆಯುವುದು. ಶುಭವಾರ್ತೆ

ಕೇಳಲು ದೊರೆಯುವುದು. ರಾಜಕೀಯ ವ್ಯಕ್ತಿಗಳಿಗೆ ಜನಮನ್ನಣೆ ದೊರೆಯುವುದು. ಕಲಾವಿದರಿಗೆ, ರೇಷ್ಮೆ ವ್ಯಾಪಾರಿಗಳಿಗೆ, ಡಾಕ್ಟರ್, ಇಂಜನಿಯರ್‌ಗಳಿಗೆ ವಿಶೇಷವಾದ ಲಾಭ ದೊರಕುವುದು.

**30. ಮನೆಯಿಂದ ಹೋಗುವಾಗ ನಾಯಿ ಬಲದಿಂದ ಎಡಕ್ಕೆ ಹೋದರೆ:**

ಪ್ರಯತ್ನಿಸಿದ ಕಾರ್ಯಗಳು ಸಫಲವಾಗುವವು. ಮನೆಯಲ್ಲಿ ಸುಖ ಸಂತೋಷಗಳು ತಾಂಡವವಾಡುವವು. ಸ್ನೇಹಿತರಿಂದ ಲಾಭ ದೊರಕುವುದು. ಹೊಸ ಉದ್ದಿಮೆಯನ್ನು ಸ್ಥಾಪಿಸಿದರೆ ವೃದ್ಧಿಯಾಗುವುದು.

**31. ಮನೆಯಿಂದ ಹೋಗುವಾಗ ನಾಯಿ ಎದುರಿಗೆ ಬಂದರೆ :**

ಮನೆಯಲ್ಲಿ ಶುಭ ಸಮಾರಂಭಗಳು ಜರುಗುವುದು. ಗೌರವ, ಕೀರ್ತಿ ಲಭಿಸುವುದು. ರೋಗ ನಿವಾರಣೆಯಾಗುವುದು. ಮಕ್ಕಳಿಲ್ಲದವರಿಗೆ ಸಂತಾನ ಲಾಭವಾಗುವುದು. ಹುದ್ದೆಯಲ್ಲಿ ಬಡ್ತಿ ದೊರೆಯುವುದು. ಸಹೋದರ ಸಹೋದರಿಯರಿಂದ ಧನಸಹಾಯ ದೊರಕುವುದು. ಎಲ್ಲಾ ವ್ಯಾಪಾರಿಗಳಿಗೂ ಹೆಚ್ಚು ಲಾಭ ದೊರಕುವುದು. ಲಾಟರಿಯಲ್ಲಿ, ಜೂಜಿನಲ್ಲಿ ಹಣ ಬರುವುದು. ಚಿನ್ನ-ಬೆಳ್ಳಿ, ರೇಷ್ಮೆ, ಕಬ್ಬಿಣ, ಎಣ್ಣೆ ವ್ಯಾಪಾರಿಗಳಿಗೆ ಹೇರಳ ಧನಲಾಭವಾಗುವುದು.

**32. ನಾಯಿಗಳು ಮನೆಯ ದನಗಳೊಡನೆ ಆಟವಾಡುತ್ತಿದ್ದರೆ :**

ಸಕಾಲಕ್ಕೆ ಮಳೆ ಬೀಳುವುದು. ಬೆಳೆ ಸಮೃದ್ಧಿಯಾಗಿ ಆಗುವುದು. ಪದಾರ್ಥಗಳ ಬೆಲೆ ಇಳಿದುಹೋಗುವುವು. ದೇಶದಲ್ಲಿ ಸುಭಿಕ್ಷೆ ಉಂಟಾಗುವುದು. ದೇವರ ಉತ್ಸವಗಳು ಎಲ್ಲಾ ಕಡೆ ವಿಜೃಂಭಣೆಯಿಂದ ನೆರವೇರುವವು. ರೋಗ ರುಜಿನಗಳು ಹೇಳ ಹೆಸರಿಲ್ಲದಂತೆ ದೂರವಾಗುವವು. ಕಳ್ಳ ಕಾಕರರ ಭಯವಿರುವುದಿಲ್ಲ. ಶುಭ ಸಮಾಚಾರಗಳು ಕೇಳಲು ದೊರಕುವುದು. ಮಕ್ಕಳಿಲ್ಲದವರಿಗೆ ಸಂತಾನಭಾಗ್ಯ ದೊರಕುವುದು.

**33. ಹಾಲಕ್ಕಿ ದಕ್ಷಿಣ ನೈಋತ್ಯ, ಪಶ್ಚಿಮ, ವಾಯುವ್ಯ ದಿಕ್ಕುಗಳಲ್ಲಿ ನುಡಿದರೆ :**

ವ್ಯಕ್ತಿಯಲ್ಲಿ ಬಡ್ತಿ ದೊರೆಯುವುದು. ವ್ಯಾಪಾರದಲ್ಲಿ ಮುನ್ನಡೆಯಾಗುವುದು. ಕೀರ್ತಿ, ಗೌರವ ದೊರಕುವುದು. ಶುಭವಾರ್ತೆಗಳು

ಕೇಳಲು ದೊರೆಯುವುದು. ಶತ್ರುಗಳು ದೂರವಾಗುವರು. ರೋಗ ನಿವಾರಣೆಯಾಗುವುದು. ಮನದ ಬಯಕೆಗಳೆಲ್ಲಾ ಈಡೇರುವುವು. ಪತ್ನಿಯಿಂದ ಆಸ್ತಿ ದೊರಕುವುದು. ಪ್ರೇಮಿಗಳಿಗೆ ವಿವಾಹಯೋಗ ಉಂಟಾಗುವುದು. ದೇವತಾಕಾರ್ಯಗಳು ಮನೆಯಲ್ಲಿ ಜರುಗುವುದು.

**34. ಪ್ರಯಾಣಕ್ಕೆ ಹೊರಟಾಗ ಹಾಲಕ್ಕಿ ಒಂದನೇ ಜಾವದಲ್ಲಿ ಬಲಭಾಗದಲ್ಲಿ ನುಡಿದರೆ :**

ಹೋದ ಕಾರ್ಯದಲ್ಲಿ ಜಯ ದೊರಕುವುದು. ಲಾಟರಿಯಲ್ಲಿ ಬಹುಮಾನ ದೊರಕುವುದು. ಹೊಸ ಕೆಲಸ ಆರಂಭಿಸಿದರೆ ಶೀಘ್ರ ವೃದ್ಧಿಯಾಗುವುದು. ವ್ಯಾಪಾರಿಗಳಿಗೆ ಹೇರಳ ಧನಲಾಭವಾಗುವುದು. ವಿವಾಹ ಸಂಬಂಧ ಕುದುರುವುದು. ಕೋರ್ಟ್ ವ್ಯವಹಾರದಲ್ಲಿ ಜಯ ದೊರಕುವುದು. ಶತ್ರುಗಳು ಮಿತ್ರರಾಗುವರು. ಪ್ರೇಮಿಗಳಿಗೆ ಜಯವಾಗುವುದು. ಸಂತಾನಭಾಗ್ಯ ದೊರಕುವುದು.

**35. ಪ್ರಯಾಣಕ್ಕೆ ಹೊರಟಾಗ ಹಾಲಕ್ಕಿ ಒಂದನೇ ಜಾವದಲ್ಲಿ ಹಿಂಭಾಗದಲ್ಲಿ ನುಡಿದರೆ :**

ಬಯಕೆಗಳೆಲ್ಲಾ ಈಡೇರುವುವು. ಶುಭವಾರ್ತೆ ಕೇಳಲು ದೊರೆಯುವುದು. ಆಸ್ತಿ ಲಾಭವಾಗುವುದು. ವೃತ್ತಿಯಲ್ಲಿ ಅಭಿವೃದ್ಧಿ ಉಂಟಾಗುವುದು. ಪಾಲುಗಾರಿಕೆಯ ವ್ಯಾಪಾರದಲ್ಲಿ ಹೆಚ್ಚು ಲಾಭ ದೊರೆಯುವುದು. ರೋಗ ನಿವಾರಣೆಯಾಗುವುದು. ವ್ಯಾಪಾರದಲ್ಲಿ ಹೆಚ್ಚು ಲಾಭ ದೊರೆಯುವುದು.

**36. ಪ್ರಯಾಣ ಮಾಡುವಾಗ ಹಾಲಕ್ಕಿ ಎರಡನೇ ಜಾವದಲ್ಲಿ ಎಡಭಾಗದಲ್ಲಿ ನುಡಿದರೆ :**

ಮೃಷ್ಟಾನ್ನ ಭೋಜನ ದೊರೆಯುವುದು. ಸಂಬಂಧಿಕರು ಪ್ರೀತಿಯಿಂದ ಆದರಿಸುವರು. ಕೋರ್ಟ್ ವ್ಯವಹಾರದಲ್ಲಿ ಜಯ ದೊರಕುವುದು. ಕಂಕಣ ಬಲ ಕೂಡಿಬರುವುದು. ಶತ್ರುಗಳು ಮಿತ್ರರಾಗುವರು. ಶುಭವಾರ್ತೆ ಕೇಳಲು ದೊರೆಯುವುದು. ವ್ಯಾಪಾರದಲ್ಲಿ ಹೆಚ್ಚು ಲಾಭ ದೊರಕುವುದು. ಪ್ರಯಾಣ ಸುಖಕರವಾಗಿರುವುದು.

**37. ಪ್ರಯಾಣಕ್ಕೆ ಹೊರಟಾಗ ಹಾಲಕ್ಕಿ ಮೂರನೇ ಜಾವದಲ್ಲಿ ಬಲಭಾಗದಲ್ಲಿ ನುಡಿದರೆ :**

ಹೋದ ಕೆಲಸ ಸಫಲವಾಗುವುದು. ಮಂತ್ರಿಗಳ ದರ್ಶನ ಸುಲಭವಾಗಿ ದೊರಕುವುದು. ಕಾರ್ಯಗಳು ನಿರ್ವಿಘ್ನವಾಗಿ ನೆರವೇರುವುವು. ಆರೋಗ್ಯ ಸುಧಾರಣೆಯಾಗುವುದು. ಗೃಹದಲ್ಲಿ ಶುಭ ಸಮಾರಂಭ ನಡೆಯುವುದು. ಭೋಗವಸ್ತುಗಳಿಂದ ಹೆಚ್ಚು ಲಾಭ ದೊರಕುವುದು. ಭಾವ ಮೈದುನರಿಂದ ಧನಲಾಭ ಉಂಟಾಗುವುದು. ಹುದ್ದೆಯಲ್ಲಿ ಬಡ್ತಿ ದೊರೆಯುವುದು.

**38. ಪ್ರಯಾಣಕ್ಕೆ ಹೊರಟಾಗ ಹಾಲಕ್ಕಿ ಮೂರನೇ ಜಾವದಲ್ಲಿ ಎದುರಿನಲ್ಲಿ ನುಡಿದರೆ :**

ಸಂತೋಷವಾರ್ತೆ ಕೇಳಲು ದೊರೆಯುವುದು. ಪ್ರಯತ್ನಿಸಿದ ಕಾರ್ಯಗಳಲ್ಲಿ ಜಯ ದೊರಕುವುದು. ದೂರ ಪ್ರಯಾಣದಿಂದ ಧನಲಾಭ ಉಂಟಾಗುವುದು. ಹುದ್ದೆಯಲ್ಲಿ ಬಡ್ತಿ ದೊರೆಯುವುದು. ಮನೆಯಲ್ಲಿ ಶುಭ ಸಮಾರಂಭಗಳು ಜರುಗುವುವು. ಆರೋಗ್ಯ ಸುಧಾರಣೆಯಾಗುವುದು. ರಾಜಕಾರಣಿಗಳಿಗೆ ಕೀರ್ತಿ, ಗೌರವ ಲಭಿಸುವುದು. ಕೋರ್ಟಿನ ವ್ಯವಹಾರದಲ್ಲಿ ಜಯ ಉಂಟಾಗುವುದು. ಶತ್ರುಗಳು ಮಿತ್ರರಾಗುವರು.

**39. ಪ್ರಯಾಣಕ್ಕೆ ಹೊರಟಾಗ ಹಾಲಕ್ಕಿ ಮೂರನೇ ಜಾವದಲ್ಲಿ ಮುಂದಿನಿಂದ ನುಡಿದರೆ :**

ಕ್ರೀಡಾ ಸ್ಪರ್ಧೆಗಳಲ್ಲಿ ಜಯ ದೊರಕುವುದು. ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿ ತೇರ್ಗಡೆ ಹೊಂದುವರು. ಪತ್ನಿಯಿಂದ ಆಸ್ತಿ ಲಾಭವಾಗುವುದು. ಶತ್ರುಗಳು ದೂರ ಸರಿಯುವರು. ಆದಾಯ ಹೆಚ್ಚಾಗುವುದು. ರೋಗಗಳು ನಿವಾರಣೆಯಾಗುವವು. ಸರಕಾರಿ ನೌಕರರು, ರಾಜಕೀಯ ವ್ಯಕ್ತಿಗಳು ಕೀರ್ತಿ, ಗೌರವ ಗಳಿಸುವರು. ದಿನಸಿ ವ್ಯಾಪಾರಿಗಳಿಗೆ ಉತ್ತಮ ಲಾಭವಾಗುವುದು.

**40. ಪ್ರಯಾಣಕ್ಕೆ ಹೊರಟಾಗ ಹಾಲಕ್ಕಿ ನಾಲ್ಕನೇ ಜಾವದಲ್ಲಿ ಬಲಭಾಗದಲ್ಲಿ ನುಡಿದರೆ :**

ಎಲ್ಲಾ ಕಾರ್ಯಗಳಲ್ಲೂ ಸಫಲತೆ ದೊರಕುವುದು. ಲಾಟರಿ, ಸಟ್ಟಾ ಜೂಜಿನಲ್ಲಿ ಅಧಿಕ ಲಾಭ ದೊರೆಯುವುದು. ಜನಮನ್ನಣೆ ದೊರಕುವುದು. ಪ್ರೇಮಿಗಳಿಗೆ ವಿವಾಹಯೋಗ ಉಂಟಾಗುವುದು. ಡಾಕ್ಟರ್, ಇಂಜಿನಿಯರ್‌ಗಳಿಗೆ ಹೇರಳ ಧನಲಾಭವಾಗುವುದು. ವಿದ್ಯಾರ್ಥಿಗಳಿಗೆ ಓದಿನಲ್ಲಿ ಆಸಕ್ತಿ ಹೆಚ್ಚುವುದು. ಎಲ್ಲಾ ರೀತಿಯ ವ್ಯಾಪಾರಿಗಳಿಗೆ ಹೆಚ್ಚು ಲಾಭ ದೊರಕುವುದು. ಬಂಧುಗಳಿಂದ ಧನಲಾಭವಾಗುವುದು. ಅಧಿಕಾರದಲ್ಲಿ ಬಡ್ತಿ ದೊರೆಯುವುದು.

**41. ಪ್ರಯಾಣಕ್ಕೆ ಹೊರಟಾಗ ಹಾಲಕ್ಕಿ ನಾಲ್ಕನೇ ಜಾವದಲ್ಲಿ ಎಡಭಾಗದಲ್ಲಿ ನುಡಿದರೆ :**

ಶುಭವಾರ್ತೆ ಕೇಳಲು ದೊರೆಯುವುದು. ಪ್ರಯತ್ನಿಸಿದ ಕಾರ್ಯಗಳಲ್ಲಿ ಜಯ ದೊರಕುವುದು. ಮನೆಯಲ್ಲಿ ಮಂಗಳ ಕಾರ್ಯಗಳು ಜರುಗುವವು. ಆದಾಯ ಹೆಚ್ಚಾಗುವುದು. ಭೋಗವಸ್ತು ವ್ಯಾಪಾರಿಗಳಿಗೆ ಹೇರಳ ಲಾಭವಾಗುವುದು. ಸಿನಿಮಾ ನಟನಟಿಯರಿಗೆ, ಕಲಾವಿದರಿಗೆ, ಬರಹಗಾರರಿಗೆ, ಪ್ರಕಾಶಕರಿಗೆ ಗೌರವ ಹಾಗೂ ಹಣ ಬರುವುದು. ಸಂಬಂಧಿಕರಿಂದ ಧನಲಾಭ ಉಂಟಾಗುವುದು.

**42. ಪ್ರಯಾಣಕ್ಕೆ ಹೊರಟಾಗ ಹಾಲಕ್ಕಿ ನಾಲ್ಕನೇ ಜಾವದಲ್ಲಿ ಎದುರಿನಲ್ಲಿ ನುಡಿದರೆ :**

ಪುಣ್ಯ ಕ್ಷೇತ್ರಗಳ ದರ್ಶನಭಾಗ್ಯ ದೊರಕುವುದು. ಮನೆಯಲ್ಲಿ ದೇವತಾ ಕಾರ್ಯಗಳು ಜರುಗುವುವು, ರೋಗಗಳು ನಿವಾರಣೆಯಾಗುವುದು. ಬಯಕೆಗಳು ಈಡೇರುವವು. ಸಂತಾನಭಾಗ್ಯ ಉಂಟಾಗುವುದು. ಭೂ ವ್ಯವಹಾರದಲ್ಲಿ ಲಾಭ ದೊರೆಯುವುದು. ಅವಿವಾಹಿತರಿಗೆ ವಿವಾಹಯೋಗ ಉಂಟಾಗುವುದು. ಹೊಸ ಹುದ್ದೆಯಲ್ಲಿ ಗೌರವ ಪ್ರಾಪ್ತಿಯಾಗುವುದು. ಆದಾಯ ಹೆಚ್ಚುವುದು. ವ್ಯಾಪಾರಿಗಳಿಗೆ ವ್ಯಾಪಾರ ಬಿರುಸಿನಿಂದ ನಡೆಯುವುದು.

**43. ಹೆಣ್ಣು-ಗಂಡು ಹಾವುಗಳು ಕ್ರೀಡಿಸುತ್ತಿರುವುದನ್ನು ನೋಡಿದರೆ :**

ಮನೆಯಲ್ಲಿ ಸೌಖ್ಯ ಹೆಚ್ಚುವುದು. ಭೋಗ ವಸ್ತುಗಳಿಂದ ಹೆಚ್ಚು ಲಾಭ ದೊರಕುವುದು. ಉನ್ನತ ಹುದ್ದೆಗೆ ಬಡ್ತಿ ದೊರೆಯುವುದು. ರಾಜಕಾರಣಿಗಳಿಗೆ ಗೌರವ, ಕೀರ್ತಿ ಲಭಿಸುವುದು. ಪ್ರಯತ್ನಿಸಿದ ಕಾರ್ಯದಲ್ಲಿ ಜಯ ದೊರಕುವುದು. ಮನೆಯಲ್ಲಿ ಶುಭ ಸಮಾರಂಭಗಳು ನಡೆಯುವುವು. ಸರಕಾರಿ ಕೆಲಸದಲ್ಲಿ ಜಯ ದೊರಕುವುದು. ವ್ಯಾಪಾರಿಗಳಿಗೆ ಹೇರಳ ಲಾಭ ದೊರಕುವುದು.

**44. ಹಾವು ಮನೆಯನ್ನು ಪ್ರವೇಶ ಮಾಡಿದರೆ:**

ಮನೆಯಲ್ಲಿ ಲಕ್ಷ್ಮಿ ತಾಂಡವವಾಡುವಳು. ಶುಭ ಸಮಾರಂಭಗಳು ಜರುಗುವುವು. ಮಿತ್ರರಿಂದ ಧನಲಾಭವಾಗುವುದು. ಸಂತಾನಭಾಗ್ಯ ಉಂಟಾಗುವುದು. ರೋಗಗಳು ನಿವಾರಣೆಯಾಗುವುದು. ಶತ್ರುಗಳು ಮಿತ್ರರಾಗುವರು. ದಾಂಪತ್ಯ ಜೀವನ ಸುಖಮಯವಾಗಿರುವುದು. ಪ್ರೇಮಿಗಳಿಗೆ ವಿವಾಹಯೋಗ ಉಂಟಾಗುವುದು. ಮಕ್ಕಳಿಂದ ಧನಲಾಭವಾಗುವುದು. ವೃತ್ತಿಯಲ್ಲಿ ಬಡ್ತಿ ದೊರೆತು ಗೌರವ, ಕೀರ್ತಿ ಲಭಿಸುವುದು.

**45. ಹಾವು ಹೆಡೆಯನ್ನು ಬಿಚ್ಚಿಕೊಂಡು ಎಡದಿಂದ ಬಲಭಾಗಕ್ಕೆ ಹಾದು ಹೋದರೆ :**

ಹೋಗುವ ಕಾರ್ಯದಲ್ಲಿ ಜಯ ದೊರಕುವುದು. ಲಾಟರಿ, ಜೂಜಿನಲ್ಲಿ ಹಣ ದೊರೆಯುವುದು. ಕೋರ್ಟ್ ವ್ಯವಹಾರದಲ್ಲಿ ಜಯ ದೊರಕುವುದು. ನಿಧಿ ದೊರಕುವುದು. ದಿನಸಿ ವ್ಯಾಪಾರಿಗಳಿಗೆ, ಸಿನಿಮಾ ನಟ ನಟಿಯರಿಗೆ, ಕಲಾವಿದರಿಗೆ, ಕರಕುಶಲ ವಸ್ತು ವ್ಯಾಪಾರಿಗಳಿಗೆ, ಡಾಕ್ಟರ್, ಇಂಜನಿಯರ್‌ಗಳಿಗೆ, ರೇಷ್ಮೆ, ಬೆಳ್ಳಿ, ಬಂಗಾರ, ಕಬ್ಬಿಣ ವ್ಯಾಪಾರಿಗಳಿಗೆ ಹೇರಳ ಲಾಭ ದೊರೆಯುವುದು. ಆರೋಗ್ಯ ಸುಧಾರಣೆಯಾಗುವುದು. ಸಂತಾನ ಭಾಗ್ಯ ದೊರಕುವುದು.

**46. ದೂರದಲ್ಲಿ ಹಾವು ಹೋಗುತ್ತಿರುವುದನ್ನು ನೋಡಿದರೆ :**

ದಾರಿದ್ರ್ಯ ಕಳೆದು ಸಿರಿತನ ಬರುವುದು, ಶತ್ರುಗಳು ಮಿತ್ರರಾಗುವರು. ಕೋರ್ಟ್ ವ್ಯವಹಾರದಲ್ಲಿ ಜಯ ದೊರಕುವುದು. ರೋಗಗಳು ನಿವಾರಣೆಯಾಗುವುವು. ಆದಾಯ ಹೆಚ್ಚುವುದು. ಪ್ರೇಮಿಗಳಿಗೆ ಜಯ ಉಂಟಾಗುವುದು, ಉತ್ತಮ ಮಿತ್ರರು ದೊರಕುವರು. ಡಾಕ್ಟರ್, ಇಂಜಿನಿಯರ್‌ಗಳಿಗೆ ಭೋಗವಸ್ತು ವ್ಯಾಪಾರಿಗಳಿಗೆ, ಕಲಾವಿದರಿಗೆ ಹೆಚ್ಚು ಧನಲಾಭ ಉಂಟಾಗುವುದು. ರಾಜಕಾರಣಿಗಳಿಗೆ ಕೀರ್ತಿ, ಗೌರವ ಲಭಿಸುವುದು.

**47. ಪ್ರಯಾಣ ಮಾಡುವಾಗ ಹಾವು ಬಲಭಾಗದಲ್ಲಿ ಹಾಗೂ ಎದುರಾಗಿ ಬಂದರೆ :**

ಪ್ರಯತ್ನಿಸಿದ ಕಾರ್ಯದಲ್ಲಿ ಜಯ ದೊರಕುವುದು. ರೋಗಗಳು ನಿವಾರಣೆಯಾಗುವುದು, ಅವಿವಾಹಿತರಿಗೆ ವಿವಾಹಯೋಗ ಉಂಟಾಗುವುದು. ಗೌರವ, ಮರ್ಯಾದೆ ದೊರೆತು ಅಭಿವೃದ್ಧಿ ಹೆಚ್ಚುವುದು. ಭೋಗವಸ್ತುಗಳು ಮತ್ತು ವಾಹನಲಾಭ ಉಂಟಾಗುವುದು. ಸುಖ ಪ್ರವಾಸ ಮಾಡುವ ಭಾಗ್ಯ ದೊರೆಯುವುದು. ಆಸ್ತಿ ಲಾಭವಾಗುವುದು. ವ್ಯಾಪಾರದಲ್ಲಿ ಮುನ್ನಡೆಯಾಗುವುದು. ಸರ್ಕಾರಿ ನೌಕರರಿಗೆ ಬಡ್ತಿ ದೊರೆಯುವುದು.

**48. ಹಾವು ಹೊರಳಾಡುವುದನ್ನು ನೋಡಿದರೆ :**

ಎಲ್ಲಾ ಕಾರ್ಯಗಳಲ್ಲೂ ಜಯ ದೊರೆತು ಜನ ಮನ್ನಣೆ ದೊರಕುವುದು, ಮನೆಯಲ್ಲಿ ಸಂತೋಷ ವಾತಾವರಣ ಏರ್ಪಡುವುದು, ಅನಿರೀಕ್ಷಿತ ಧನಲಾಭ ಹಾಗೂ ಆಸ್ತಿ ಲಾಭವಾಗುವುದು. ಪ್ರೇಮಿಗಳಿಗೆ ವಿವಾಹಯೋಗ ಉಂಟಾಗುವುದು. ಹಳೆಯ ರೋಗಗಳು ವಾಸಿಯಾಗುವುವು. ವ್ಯಾಪಾರಿಗಳಿಗೆ ಹೇರಳ ಧನಲಾಭ ಉಂಟಾಗುವುದು. ಕೋರ್ಟ್ ವ್ಯವಹಾರದಲ್ಲಿ ಜಯ ದೊರಕುವುದು. ಪಾಲುಗಾರಿಕೆ ವ್ಯವಹಾರದಲ್ಲಿ ವಿಶೇಷ ಲಾಭ ಉಂಟಾಗುವುದು.

**49. ಹಾವು ಹೆಡೆ ಆಡಿಸುತ್ತಿರುವುದನ್ನು ನೋಡಿದರೆ :**

ಅನಿರೀಕ್ಷಿತ ಧನಲಾಭ ಉಂಟಾಗುವುದು. ಲಾಟರಿ, ಸಟ್ಟಾ, ಜೂಜಿನಲ್ಲಿ ಹೇರಳ ಹಣ ದೊರೆಯುವುದು. ಪ್ರಯತ್ನಿಸಿದ ಕಾರ್ಯಗಳಲ್ಲಿ ಜಯ ದೊರಕುವುದು. ಎಲ್ಲಾ ರೀತಿಯ ವ್ಯಾಪಾರಗಳಲ್ಲಿ ಬಹಳಷ್ಟು ಧನಲಾಭವಾಗುವುದು. ಕೋರ್ಟ್ ವ್ಯವಹಾರಗಳಲ್ಲಿ ಜಯ ದೊರಕುವುದು. ಆಸ್ತಿ ಲಾಭ ಉಂಟಾಗುವುದು. ಸಂತಾನ ಭಾಗ್ಯ ಉಂಟಾಗುವುದು. ಬಯಕೆಗಳೆಲ್ಲಾ ಈಡೇರುವವು. ಹುದ್ದೆಯಲ್ಲಿ ಬಡ್ತಿ ದೊರೆಯುವುದು.

**50. ಹಾವು ಹುತ್ತದಿಂದ ಮೇಲಕ್ಕೆ ಬರುವುದನ್ನು ನೋಡಿದರೆ :**

ದಾರಿದ್ರ್ಯ ನಿರ್ಮೂಲವಾಗುವುದು. ವಿಶೇಷವಾಗಿ ಧನಲಾಭವಾಗುವುದು. ಲಾಟರಿಯಲ್ಲಿ ಹಣ ದೊರಕುವುದು. ಭೂವ್ಯವಹಾರದಲ್ಲಿ ಲಾಭ ಉಂಟಾಗುವುದು. ಗೌರವ, ಮರ್ಯಾದೆಗಳು ದೊರಕುವುವು. ಶತ್ರುಗಳು ಮಿತ್ರರಾಗುವರು. ಸಂಬಂಧಿಕರಿಂದ ಧನಸಹಾಯ ದೊರೆಯುವುದು. ರೋಗ ನಿವಾರಣೆಯಾಗುವುದು. ಶುಭ ಸಮಾರಂಭಗಳು ಜರುಗುವುದು. ಸಂತಾನ ಭಾಗ್ಯ ಉಂಟಾಗುವುದು.

**51. ಹೊಲದಲ್ಲಿ ಹುತ್ತಲಿಕ್ಕೆ ಹೋದಾಗ ಹಾವು ಹೆಡೆಯೆತ್ತಿ ಆಡುತ್ತಿದ್ದರೆ, ಬಂದವರನ್ನು ನೋಡಿ ಓಡಿಹೋದರೆ :**

ಸಕಾಲಕ್ಕೆ ಮಳೆ ಬಿದ್ದು ಬೆಳೆ ಸಮೃದ್ಧಿಯಾಗಿ ಆಗುವುದು. ಎಲ್ಲಾ ವಸ್ತುಗಳು ಬೆಲೆ ಕಡಿಮೆಯಾಗುವುದು. ಮನೆಯಲ್ಲಿ ಮಂಗಳ ಕಾರ್ಯಗಳು ಜರುಗುವವು. ಸುಖ ಪ್ರವಾಸ ಮಾಡುವ ಯೋಗ ದೊರೆಯುವುದು. ಸಂಬಂಧಿಕರಿಂದ ಧನಸಹಾಯ ದೊರೆಯುವುದು. ರೋಗಗಳು ನಿವಾರಣೆಯಾಗುವುದು. ಶತ್ರುಗಳು ಮಿತ್ರರಾಗುವರು. ಆಸ್ತಿಯ ಲಾಭವಾಗುವುದು. ಕೋರ್ಟ್ ವ್ಯವಹಾರದಲ್ಲಿ ಜಯ ದೊರಕುವುದು. ಎಲ್ಲಾ ಕೆಲಸದಲ್ಲಿ ಜಯವು ಉಂಟಾಗುವುದು.

**52. ಹಾವು ಚಾವಡಿಯಲ್ಲಿ ಹೋದರೆ :**

ಊರಿನ ಜನರಿಗೆ ಶುಭವಾಗುವುದು. ಬೆಳೆ ಸಮೃದ್ಧಿಯಾಗಿ

ಆಗುವುದು. ದೇವತಾ ಕಾರ್ಯಗಳು ವಿಜೃಂಭಣೆಯಿಂದ ನಡೆಯುವವು. ಸಕಾಲಕ್ಕೆ ಮಳೆ ಬಿದ್ದು ಊರ ಜನರು ಸುಖ ಸಂತೋಷದಿಂದ ಜೀವನ ನಡೆಸುವರು. ಊರಿನ ಕೀರ್ತಿ ದೇಶದ ಎಲ್ಲಾ ಕಡೆ ಹರಡುವುದು. ಊರಿನ ಪ್ರಮುಖರು ಊರಿನ ಏಳ್ಗೆಯ ಕೆಲಸಗಳನ್ನು ಮಾಡುವರು. ಕಲಾವಿದರಿಗೆ ವಿಶೇಷ ಮರ್ಯಾದೆ ದೊರಕುವುದು.

**53. ಹಾವು ಬಲಭಾಗದಲ್ಲಿ ಕೂಗಿದರೆ :**

ಶತ್ರುಗಳು ಮಿತ್ರರಾಗುವರು. ಭೂ ವ್ಯವಹಾರದಲ್ಲಿ ಲಾಭ ಉಂಟಾಗುವುದು. ಲಾಟರಿಯಲ್ಲಿ ಹಣ ಲಾಭವಾಗುವುದು. ಸರಕಾರಿ ಕೆಲಸದಲ್ಲಿ ಜಯ ದೊರಕುವುದು. ಆರೋಗ್ಯ ಉತ್ತಮವಾಗಿರುವುದು. ಜನಮನ್ನಣೆ ದೊರೆಯುವುದು. ಮನದ ಬಯಕೆಗಳೆಲ್ಲಾ ಈಡೇರುವುವು. ಸ್ವಂತ ಉದ್ದಿಮೆಯಲ್ಲಿ ಹೇರಳ ಧನಲಾಭ ಉಂಟಾಗುವುದು. ಶುಭ ಸಮಾಚಾರಗಳು ಕೇಳಲು ದೊರೆಯುವುದು. ಪ್ರೇಮಿಗಳಿಗೆ ವಿವಾಹಯೋಗ ಉಂಟಾಗುವುದು.

**54. ಓತಿಕ್ಯಾತ ಶರೀರದ ಎಡಭಾಗಕ್ಕೆ ಬಿದ್ದರೆ :**

ದರಿದ್ರತೆ ದೂರಾಗುವುದು. ಧನಲಾಭ, ಆಸ್ತಿ ಲಾಭವಾಗುವುದು. ಲಾಟರಿ, ಸಟ್ಟಾ ಜೂಜಿನಲ್ಲಿ ವಿಶೇಷವಾಗಿ ಧನಲಾಭವಾಗುವುದು. ಆಸ್ತಿ ಲಾಭವಾಗುವುದು. ಎಲ್ಲಾ ರೀತಿಯ ವ್ಯಾಪಾರದಲ್ಲಿ ಅಪಾರ ಧನಲಾಭವಾಗುವುದು. ಮನೆಯಲ್ಲೇ ನಿಧಿ ದೊರೆಯುವ ಸಾಧ್ಯತೆಯುಂಟು. ಬಂಧುಗಳಿಂದ ಧನ ಉಡುಗೊರೆಯಾಗಿ ಬರುವುದು. ಪತ್ನಿಯಿಂದ ಹಣ ದೊರೆಯುವುದು.

**55. ಓತಿಕೇತ ಎರಡು ಪಾದಗಳ ಮೇಲೆ ಬಿದ್ದರೆ :**

ಲಾಟರಿಯಲ್ಲಿ ಬೆಲೆಬಾಳುವ ಬಹುಮಾನ ಬರುವುದು. ವ್ಯಾಪಾರದಲ್ಲಿ ಆಶ್ಚರ್ಯಕರ ರೀತಿಯಲ್ಲಿ ಧನಲಾಭವಾಗುವುದು. ಮಿತ್ರರಿಂದ ಹಣ ಉಡುಗೊರೆಯಾಗಿ ದೊರೆಯುವುದು. ಮಾವನ ಮನೆಯವರಿಂದ ಧನ ದೊರಕುವುದು. ಜೂಜಿನಲ್ಲಿ ವಿಶೇಷವಾಗಿ ಹಣ

ಬರುವುದು. ಸರಕಾರದಿಂದ ಸಹಾಯ ಧನ ಸಿಗುವುದು. ಬಂಗಾರದ ಆಭರಣಗಳು ಉಡುಗೊರೆಯಾಗಿ ಬರುವವು.

**56. ಓತಿಕೇತ ಬಲ ಮೊಣಕಾಲ ಮೇಲೇರಿ ಬಂದರೆ :**

ಸುಖ ಪ್ರಯಾಣ ಮಾಡುವ ಯೋಗ ದೊರಕುವುದು. ಪುಣ್ಯಕ್ಷೇತ್ರಗಳ ದರ್ಶನಭಾಗ್ಯ ದೊರಕುವುದು. ಮೃಷ್ಟಾನ್ನ ಭೋಜನ ಹೋದ ಕಡೆಯೆಲ್ಲಾ ದೊರೆಯುವುದು.

**57. ಓತಿಕೇತ ಪಾದದ ಮೇಲೇರಿ ಬಂದರೆ :**

ಶುಭವಾರ್ತೆಗಳು ಕೇಳಲು ದೊರೆಯುವುದು. ಕೋರ್ಟಿನ ವ್ಯವಹಾರದಲ್ಲಿ ಜಯ ದೊರಕುವುದು. ಎಲ್ಲಾ ಕಡೆ ಗೌರವ, ಕೀರ್ತಿ ದೊರೆಯುವುದು. ಹಳೆಯ ರೋಗಗಳು ನಿವಾರಣೆಯಾಗುವುವು. ಸಂತಾನ ಭಾಗ್ಯ ಉಂಟಾಗುವುದು. ಅವಿವಾಹಿತರಿಗೆ, ಪ್ರೇಮಿಗಳಿಗೆ ವಿವಾಹಯೋಗ ಉಂಟಾಗುವುದು. ವ್ಯಾಪಾರಿಗಳಿಗೆ ಬಹಳಷ್ಟು ಧನಲಾಭವಾಗುವುದು.

**58. ಓತಿಕೇತ ಎದೆಯ ಮೇಲೇರಿ ಬಂದರೆ :**

ಮನಃ ತೃಪ್ತಿಯಾಗುವಷ್ಟು ಸಂಭೋಗ ಸುಖ ದೊರೆಯುವುದು. ಪ್ರೇಮಿಗಳಿಗೆ ವಿವಾಹವಾಗುವುದು. ಅವಿವಾಹಿತರಿಗೆ ಸುಂದರ ಪತ್ನಿ ದೊರಕುವುದು.

**59. ಓತಿಕೇತ ಭುಜದ ಮೇಲೇರಿ ಬಂದರೆ :**

ಎಲ್ಲಾ ಕಾರ್ಯಗಳಲ್ಲೂ ಜಯ ದೊರಕುವುದು. ರಾಷ್ಟ್ರಪ್ರಶಸ್ತಿ ದೊರಕುವುದು. ಎಲ್ಲಾ ಕಡೆ ಗೌರವ, ಕೀರ್ತಿ ಲಭಿಸುವುವು. ಶತ್ರುಗಳು ಮಿತ್ರರಾಗುವರು. ಸರ್ಕಾರಿ ಹುದ್ದೆಯಲ್ಲಿ ಬಡ್ತಿ ದೊರೆಯುವುದು.

**60. ಓತಿಕೇತ ತೊಡೆಯ ಮೇಲೇರಿ ಬಂದರೆ :**

ಸಂತಾನವಿಲ್ಲದವರಿಗೆ ಮಕ್ಕಳಾಗುವವು. ಮದುವೆಯಾಗದವರಿಗೆ ಮದುವೆಯಾಗುವುದು. ಶುಭ ಸಮಾರಂಭಗಳು ಮನೆಯಲ್ಲಿ ಜರುಗುವವು. ಬಂಧುಗಳ ಆಗಮನವಾಗುವುದು.

**61. ವೊಣ್ಣೇಕೇತ ಅಥವಾ ಹಾವುರಾಣಿ ಮೂಗಿನ ಮೇಲೆ ಬಿದ್ದರೆ :**

ಹಳೆಯ ರೋಗಗಳು ಗುಣವಾಗುವುವು. ಆರೋಗ್ಯ ಉತ್ತಮಗೊಳ್ಳುವುದು. ಪ್ರಯತ್ನಿಸಿದ ಕಾರ್ಯದಲ್ಲಿ ಜಯ ದೊರಕುವುದು.

**62. ವೊಣ್ಣೇಕೇತ ಅಥವಾ ಹಾವುರಾಣಿ ಎದೆಯ ಮೇಲೆ ಬಿದ್ದರೆ :**

ಎಲ್ಲಾ ಕಾರ್ಯಗಳಲ್ಲಿ ಜಯ ದೊರಕುವುದು. ಎಲ್ಲಾ ರೀತಿಯಿಂದಲೂ ಸೌಖ್ಯ ಉಂಟಾಗುವುದು. ಮೃಷ್ಟಾನ್ನ ಭೋಜನ ದೊರೆಯುವುದು. ಸುಖ ಪ್ರವಾಸ ಮಾಡುವ ಯೋಗ ದೊರಕುವುದು. ಸ್ತ್ರೀ ಸುಖ ದೊರಕುವುದು. ಗೌರವ ಕೀರ್ತಿ ದೊರೆಯುವುದು. ಅನಿರೀಕ್ಷಿತ ಧನಲಾಭವಾಗುವುದು. ಬಂಧು-ಮಿತ್ರರಿಂದ ಸಹಾಯ ದೊರಕುವುದು.

**63. ವೊಣ್ಣೇಕೇತ ಅಥವಾ ಹಾವುರಾಣಿ ಭುಜಗಳ ಮೇಲೆ ಬಿದ್ದರೆ :**

ಗೌರವ ಮತ್ತು ಕೀರ್ತಿ ಲಭಿಸುವುದು. ಆರೋಗ್ಯ ಸುಧಾರಣೆ ಯಾಗುವುದು. ಮನೆಯಲ್ಲಿ ಶುಭ ಸಮಾರಂಭಗಳು ಜರುಗುವುವು. ರಾಜಕಾರಣಿಗಳಿಗೆ, ಸರಕಾರಿ ನೌಕರರಿಗೆ, ಬರಹಗಾರರಿಗೆ, ಲಾಯರ್‌ಗಳಿಗೆ, ಭೋಗವಸ್ತು ವ್ಯಾಪಾರಿಗಳಿಗೆ, ಕರಕುಶಲ ವಸ್ತು ತಯಾರಕರಿಗೆ ನಟನಟಿಯರಿಗೆ ವಿಶೇಷ ಲಾಭವಾಗುವುದು.

**64. ವೊಣ್ಣೇಕೇತ ಅಥವಾ ಹಾವುರಾಣಿ ಹಣೆಗೆ ಬಿದ್ದರೆ :**

ಪ್ರಯತ್ನಿಸಿದ ಕಾರ್ಯದಲ್ಲಿ ಜಯ ದೊರಕುವುದು. ಎಲ್ಲಾ ವ್ಯಾಪಾರಿಗಳಿಗೆ ವಿಶೇಷ ಧನಲಾಭವಾಗುವುದು. ಪತ್ನಿಯಿಂದ ಆಸ್ತಿ ಲಾಭವಾಗುವುದು. ಸ್ನೇಹಿತರಿಂದ ಧನಲಾಭವಾಗುವುದು.

**65. ವೊಣ್ಣೇಕೇತ ಅಥವಾ ಹಾವುರಾಣಿ ಕಿವಿಯ ಮೇಲೆ ಬಿದ್ದರೆ :**

ಆರೋಗ್ಯ ಸುಧಾರಣೆಯಾಗಿ ಮುಖದಲ್ಲಿ ಒಂದು ರೀತಿಯ ವರ್ಚಸ್ಸು ಮೂಡುವುದು. ಬಂಗಾರದ ಆಭರಣಗಳ ಅಲಂಕಾರ ಪ್ರಾಪ್ತಿಯಾಗುವುದು. ಮನದ ಬಯಕೆಗಳೆಲ್ಲಾ ಈಡೇರುವುವು.

**66. ವೊಣ್ಣೇಕೇತ ಅಥವಾ ಹಾವುರಾಣಿ ಹೊಟ್ಟೆಯ ಮೇಲೆ ಬಿದ್ದರೆ :**

ಮನೆಗೆ ಅತಿಥಿಗಳು ಆಗಮಿಸುವರು. ಮನೆಯಲ್ಲಿ ಶುಭ

ಸಮಾರಂಭಗಳು ನಡೆಯುವುವು. ಪ್ರಯತ್ನ ಕಾರ್ಯಗಳು ಸುಲಭವಾಗಿ ಜಯವಾಗುವುವು.

**67. ಮೊಣ್ಣೇಕೇತ ಅಥವಾ ಹಾವುರಾಣಿ ಎಡ ಪಕ್ಕೆಯ ಮೇಲೆ ಬಿದ್ದರೆ :**

ವ್ಯಾಪಾರದಲ್ಲಿ ಹೇರಳ ಲಾಭವಾಗುವುದು. ಪತ್ನಿಯಿಂದ ಆಸ್ತಿ ಲಾಭವಾಗುವುದು. ಮಿತ್ರರಿಂದ ಧನಲಾಭವಾಗುವುದು. ನಿಧಿ ದೊರೆಯುವ ಸಂಭವವುಂಟು.

**68. ಮೊಣ್ಣೇಕೇತ ಅಥವಾ ಹಾವುರಾಣಿ ಎಡ ಹೆಜ್ಜೆಯ ಮೇಲೆ ಬಿದ್ದರೆ :**

ಧನಲಾಭವಾಗುವುದು. ಸುಖ ಪ್ರವಾಸದಲ್ಲಿಯೂ ವ್ಯಾಪಾರ ಕುದುರಿ ವಿಶೇಷ ಧನಲಾಭವಾಗುವುದು. ಲಾಟರಿಯಲ್ಲಿ ಹಣ ದೊರೆಯುವುದು.

**69. ಗರುಡ ಪಕ್ಷಿ ಬಲದಿಂದ ಎಡಕ್ಕೆ ಹೋದರೆ :**

ಮನದ ಬಯಕೆಗಳೆಲ್ಲಾ ಈಡೇರುವವು. ಪ್ರಯತ್ನಿಸಿದ ಕಾರ್ಯದಲ್ಲಿ ಜಯ ದೊರಕುವುದು. ಕೋರ್ಟ್ ವ್ಯವಹಾರದಲ್ಲಿ ಜಯ ದೊರಕುವುದು.

**70. ಪ್ರಯಾಣಕ್ಕೆ ಹೊರ ಹೊರಟಾಗ ಬೆಕ್ಕು ಇಲಿಯನ್ನು ಕಚ್ಚಿಕೊಂಡು ಎದುರಾಗಿ ಬಂದರೆ :**

ಶತ್ರುಗಳಿಗೆ ಸೋಲುಂಟಾಗುವುದು. ಎಲ್ಲಾ ಕಡೆಯಿಂದಲೂ ಶುಭ ವಾರ್ತೆ ಕೇಳಲು ದೊರೆಯುವುದು. ದಾಂಪತ್ಯ ಜೀವನ ಸುಖಮಯ ವಾಗಿರುವುದು. ರೋಗಗಳು ನಿವಾರಣೆಯಾಗುವುವು.

**71. ಪ್ರಯಾಣಕ್ಕೆ ಹೊರಟಾಗ ಬೆಕ್ಕು ಮೋರೆ ತೊಳೆದುಕೊಳ್ಳುವುದು ಕಂಡುಬಂದರೆ :**

ಮನೆಯಲ್ಲಿ ಶುಭಕಾರ್ಯಗಳು ಜರುಗಿ ಸಂಬಂಧಿಕರು ಆಗಮಿಸುವರು. ಮಿತ್ರರು ಆಗಮಿಸುವರು.

**72. ಪ್ರಯಾಣಕ್ಕೆ ಹೊರಟಾಗ ನಾಯಿಯನ್ನು ನೋಡಿ ಓಡಿ ಬರುವ ಬೆಕ್ಕನ್ನು ಕಂಡರೆ :**

ಶತ್ರುಗಳಿಗೆ ಅಪಜಯ ಉಂಟಾಗುವುದು, ಕೋರ್ಟ್ ವ್ಯವಹಾರ ದಲ್ಲಿ ಜಯ ದೊರಕುವುದು.

**73. ಇಲಿಗೆ ಅಂಜಿ ಬೆಕ್ಕು ಓದುವುದನ್ನು ಕಂಡರೆ :**

ಎಲ್ಲಾ ವಿಘ್ನಗಳು ಪರಿಹಾರವಾಗುವು. ಮನಸ್ಸಿಗೆ ನೆಮ್ಮದಿ ದೊರೆಯುವುದು.

**74. ಬೆಕ್ಕುಮರಿ ಕಚ್ಚಿಕೊಂಡು ಬರುವುದನ್ನು ಕಂಡರೆ :**

ಶೀಘ್ರದಲ್ಲಿಯೇ ಸ್ಥಳ ಬದಲಾವಣೆಯಾಗುವುದು.

**75. ಬೆಕ್ಕು, ಹಲ್ಲಿ ಮುಂತಾದವುಗಳನ್ನು ಕೊಲ್ಲುತ್ತಿರುವುದನ್ನು ಕಂಡರೆ :**

ಶ್ರಮದಿಂದ ಕೆಲಸಗಳು ಆಗುವವು.

**76. ಬೆಕ್ಕು ಭಯಪಟ್ಟು ಬಂದು ಬಚ್ಚಿಟ್ಟುಕೊಂಡಿರುವುದನ್ನು ಕಂಡರೆ :**

ಕಾರ್ಯಗಳು ರಹಸ್ಯವಾಗಿ ಕೈಗೂಡುವುದು.

**77. ಬೆಕ್ಕು ಕಾರುವುದನ್ನು ನೋಡಿದರೆ :**

ಹಳೆಯ ರೋಗಗಳು ವಾಸಿಯಾಗುವವು, ಆರೋಗ್ಯ ಮತ್ತಷ್ಟು ಉತ್ತಮಗೊಳ್ಳುವುದು.

**78. ಕಾರ್ಯಗಳನ್ನು ಮಾಡುವಾಗ ಅಥವಾ ಆಲೋಚಿಸುವಾಗ ಅನ್ಯರು ಎರಡು ಬಾರಿ ಸೀನಿದರೆ :**

ನೆನೆಸಿದ ಕಾರ್ಯಗಳು ಕೈಗೂಡುವವು. ಎಲ್ಲಾ ರೀತಿಯಿಂದಲೂ ಶುಭವೇ ಆಗುವುದು.

**79. ಕಾರ್ಯಗಳನ್ನು ಮಾಡುವಾಗ ಅಥವಾ ಆಲೋಚಿಸುವಾಗ ಅನ್ಯರು ಸೀತು ಆಕಳಿಸಿದರೆ :**

ಕೆಲಸ ನಿಧಾನವಾಗಿ ಕೈಗೂಡುವುದು.

**80. ಕಾರ್ಯಗಳನ್ನು ಮಾಡುವಾಗ ಅಥವಾ ಆಲೋಚಿಸುವಾಗ ಅನ್ಯರು ಸೀತು ಕಂಚನ್ನಾಗಲೀ ಮತ್ತು ತಾಮ್ರವನ್ನಾಗಲೀ ಮುಟ್ಟಿದ್ದು ಕಂಡರೆ :**

ದ್ರವ್ಯ ಲಾಭವಾಗುವುದು. ಲಾಟರಿಯಲ್ಲಿ ಹಣ ಬರುವುದು. ಜೂಜಿನಲ್ಲಿ ಗೆಲುವುಂಟಾಗುವುದು.

**81. ಕಾರ್ಯಗಳನ್ನು ಮಾಡುವಾಗ ಅಥವಾ ಆಲೋಚಿಸುವಾಗ ಅನ್ಯರು ಸೀತು ನೀರನ್ನು ಮುಟ್ಟಿದರೆ :**

ಎಲ್ಲಾ ರೀತಿಯಿಂದಲೂ ಶುಭವೇ ಆಗುವುದು.

**82. ಕಾರ್ಯಗಳನ್ನು ಮಾಡುವಾಗ ಅಥವಾ ಆಲೋಚಿಸುವಾಗ ಎಳೆ ಮಕ್ಕಳು, ಬಾಣಂತಿಯರು, ವೇಶ್ಯೆ, ಹರಿಜನ ಹೆಣ್ಣು ಕುಂಟ ರೋಗವುಳ್ಳವನು ಸೀತರೆ :**

ಎಲ್ಲಾ ಕಾರ್ಯಗಳು ಸುಲಭವಾಗಿ ಕೈಗೂಡುವುವು. ಮನೆಯಲ್ಲಿ ಶುಭ ಸಮಾರಂಭಗಳು ಜರುಗುವುವು.

**83. ಸ್ತ್ರೀ, ಪುರುಷರ ತಲೆಯ ಬಲಭಾಗದಲ್ಲಿನ ನರಗಳು ಹಾರಿದರೆ :**

ದೂರ ಪ್ರಯಾಣ ಮಾಡುವ ಯೋಗ ಉಂಟಾಗುವುದು.

**84. ಸ್ತ್ರೀ, ಪುರುಷರ ತಲೆಯ ಎಡಭಾಗದಲ್ಲಿನ ನರಗಳು ಹಾರಿದರೆ :**

ವಿಶೇಷ ಮರ್ಯಾದೆ ಗೌರವ ದೊರೆಯುವುದು.

**85. ಸ್ತ್ರೀ, ಪುರುಷರ ಮುಂದಲೆಯ ನರಗಳು ಹಾರಿದರೆ :**

ಮನೆಗೆ ಬಂಧುಗಳು ಬರುವರು.

**86. ಸ್ತ್ರೀ, ಪುರುಷರ ಬಲದ ಹಣೆಯ ನರ ಹಾರಿದರೆ :**

ಎಲ್ಲಾ ಕೆಲಸಗಳೂ ಕೈಗೂಡುವುವು.

**87. ಸ್ತ್ರೀ ಪುರುಷರ ಎಡದ ಹಣೆಯ ನರ ಹಾರಿದರೆ :**

ರೋಗಗಳು ನಿವಾರಣೆಯಾಗುವುದು. ಆರೋಗ್ಯ ಉತ್ತಮಗೊಳ್ಳುವುದು.

**88. ಸ್ತ್ರೀ, ಪುರುಷರ ಬಲದ ಹುಬ್ಬು ಹಾರಿದರೆ :**

ಎಲ್ಲರ ಪ್ರೀತಿ ದೊರಯುವುದು.

**89. ಸ್ತ್ರೀ, ಪುರುಷರ ಎಡದ ಹುಬ್ಬು ಹಾರಿದರೆ :**
ಹಳೇ ಸುದ್ದಿ ಕೇಳಲು ದೊರೆಯುವುದು.

**90. ಸ್ತ್ರೀ, ಪುರುಷರ ಕೆಳ ಕಣ್ಣು ರೆಪ್ಪೆ ಹಾರಿದರೆ :**
ಶತ್ರು ನಿರ್ನಾಮವಾಗುವರು.

**91. ಸ್ತ್ರೀ, ಪುರುಷರ ಬಲದ ಮೂಗಿನ ನರ ಹಾರಿದರೆ :**
ಐಶ್ವರ್ಯ ದೊರೆಯುವುದು.

**92. ಸ್ತ್ರೀ, ಪುರುಷರ ಎಡದ ಮೂಗಿನ ನರ ಹಾರಿದರೆ :**
ಸ್ತ್ರೀ ಸುಖ ದೊರೆಯುವುದು.

**93. ಸ್ತ್ರೀ, ಪುರುಷರ ಎಡದ ಕಿವಿ ಹಾರಿದರೆ :**
ಧನಲಾಭವಾಗುವುದು.

**94. ಸ್ತ್ರೀ, ಪುರುಷರ ಬಲದ ಗಲ್ಲದ ನರ ಹಾರಿದರೆ :**
ಸ್ತ್ರೀ ಸುಖ ದೊರೆಯುವುದು.

**95. ಸ್ತ್ರೀ, ಪುರುಷರ ಮೇಲಿನ ತುಟಿ ಹಾರಿದರೆ.:**
ಸಂಪತ್ತು ದೊರೆಯುವುದು.

**96. ಸ್ತ್ರೀ, ಪುರುಷರ ಕೆಳಗಿನ ತುಟಿ ಹಾರಿದರೆ :**
ಒಬ್ಬನಿಂದ ಅನುಕೂಲವಾಗುವುದು.

**97. ಸ್ತ್ರೀ, ಪುರುಷರ ಎಡದ ಹೆಗಲು ಹಾರಿದರೆ :**
ಎಲ್ಲಾ ರೀತಿಯಿಂದಲೂ ಶುಭವಾಗುವುದು.

**98. ಸ್ತ್ರೀ, ಪುರುಷರ ಬಲದ ರಟ್ಟೆ ಹಾರಿದರೆ :**
ಶುಭ ಕೆಲಸಗಳು ಆಗುವುದು.

**99. ಸ್ತ್ರೀ, ಪುರುಷರ ಬಲದ ಭುಜ ಹಾರಿದರೆ :**
ಧನ-ಧಾನ್ಯ, ಸಂಪತ್ತು ದೊರೆಯುವುದು.

**100. ಸ್ತ್ರೀ, ಪುರುಷರ ಎಡದ ಮೊಲೆ ಹಾರಿದರೆ :**
ಮನದ ಬಯಕೆಗಳೆಲ್ಲಾ ಈಡೇರುವವು. ಶುಭವೇ ಜರುಗುವುದು.

**101. ಸ್ತ್ರೀ, ಪುರುಷರ ಬಲದ ತೊಡೆ ಹಾರಿದರೆ :**
ಎಲ್ಲಾ ರೀತಿಯಿಂದಲೂ ಒಳ್ಳೆಯದೇ ಆಗುವುದು.

**102. ಸ್ತ್ರೀ, ಪುರುಷರ ಎಡದ ಮೊಣಕಾಲು ಹಾರಿದರೆ :**
ಸಂತೋಷ ಉಂಟಾಗುವ ಕಾರ್ಯಗಳು ಜರುಗುವವು.

**103. ಸ್ತ್ರೀ, ಪುರುಷರ ಪಾದ ಹಾರಿದರೆ :**
ದೂರದ ಪ್ರಯಾಣ ಉಂಟಾಗುವುದು.

**104. ಸ್ತ್ರೀ, ಪುರುಷರ ಅಂಗೈ ನರಗಳು ಹಾರಿದರೆ :**
ಧನಲಾಭ ಉಂಟಾಗುವುದು.

**105. ಪುರುಷರ ಬಲಗಣ್ಣಿನ ಮೇಲ್ಭಾಗ ಬಲಗಡೆ ಹಾರಿದರೆ :**
ಕೀರ್ತಿ ದೊರೆಯುವುದು.

**106. ಪುರುಷರ ಬಲಗಣ್ಣಿನ ಮೇಲುದೋಟಿಯ ಬಲಗಡೆ ಹಾರಿದರೆ :**
ಕೀರ್ತಿ ವೃದ್ಧಿಯಾಗುವುದು, ಜನಮನ್ನಣೆ ದೊರೆಯುವುದು.

**107. ಸ್ತ್ರೀಯರ ಕೆಳರೆಪ್ಪೆಯ ಬಲಗಡೆ ಹಾರಿದರೆ :**
ಸುಖವು ದೊರೆಯುವುದು.

**108. ಸ್ತ್ರೀಯರ ಎಡಗಣ್ಣಿನ ಮೇಲಿನ ರೆಪ್ಪೆಯು ಹಾರಿದರೆ :**
ಸಂತೋಷ ಉಂಟಾಗುವುದು.

**109. ಸ್ತ್ರೀಯರ ಕೆಳರೆಪ್ಪೆಯ ಬಲಗಡೆ ಹಾರಿದರೆ :**
ಲಾಭ ಪ್ರಾಪ್ತಿಯಾಗುವುದು.

**110. ಯಾವ ವಿಷಯವನ್ನಾದರೂ ಆಲೋಚಿಸುತ್ತಾ ಕುಳಿತಿರುವ ಸಮಯದಲ್ಲಿ ಹಲ್ಲಿ ಎರಡು ಬಾರಿ ಲೊಚಗುಟ್ಟಿದರೆ :**
ಎಲ್ಲಾ ಕಾರ್ಯವೂ ಶುಭವಾಗಿ ನಡೆದು ಸುಖಪ್ರಾಪ್ತಿಯಾಗುವುದು.

**111. ಯಾವ ವಿಷಯವನ್ನಾದರೂ ಆಲೋಚಿಸುತ್ತಾ ಕುಳಿತಿರುವ ಸಮಯದಲ್ಲಿ ಹಲ್ಲಿ ಐದು ಬಾರಿ ಲೊಚಗುಟ್ಟಿದರೆ :**
ಕೆಲ ಕೈಗೂಡುವುದು, ಎಲ್ಲ ರೀತಿಯಿಂದಲೂ ಒಳ್ಳೆಯವೇ ಆಗುವುದು.

**112. ಯಾವ ವಿಷಯವನ್ನಾದರೂ ಆಲೋಚಿಸುತ್ತಾ ಕುಳಿತಿರುವ ಸಮಯದಲ್ಲಿ ಹಲ್ಲಿ ಏಳು ಬಾರಿ ಲೊಚಗುಟ್ಟಿದರೆ :**
ಮನೆಗೆ ಬಂಧುಗಳು ಆಗಮಿಸುವರು.

**113. ಹಲ್ಲಿಯು ಹಣೆಯ ಮೇಲೆ ಬಿದ್ದರೆ :**
ಮದುವೆ ಇಲ್ಲದವರಿಗೆ ಮದುವೆಯಾಗುವುದು.

**114. ಹಲ್ಲಿ ಎಡದ ಕಿವಿಯ ಮೇಲೆ ಬಿದ್ದರೆ :**
ಅಲಂಕಾರ ವಸ್ತುಗಳ ಲಾಭವಾಗುವುದು.

**115. ಹಲ್ಲಿ ಬಲದ ಹುಬ್ಬಿನ ಮೇಲೆ ಬಿದ್ದರೆ :**
ಧನಲಾಭವಾಗುವುದು.

**116. ಹಲ್ಲಿ ಎರಡು ಹುಬ್ಬಿನ ಮಧ್ಯೆ ಬಿದ್ದರೆ :**
ಅಪೂರ್ವ ದರ್ಶನಭಾಗ್ಯ ದೊರೆಯುವುದು.

**117. ಹಲ್ಲಿ ಬಲದ ಕಣ್ಣಿನ ಮೇಲೆ ಬಿದ್ದರೆ :**
ಲಾಭ ದೊರೆಯುವುದು.

**118. ಹಲ್ಲಿ ಮೇಲ್ತುಟಿಯ ಮೇಲೆ ಬಿದ್ದರೆ :**
ಮೃಷ್ಟಾನ್ನ ದೊರೆಯುವುದು.

**119. ಹಲ್ಲಿ ಮುಚ್ಚಿದ ಬಾಯಿಯ ಮೇಲೆ ಬಿದ್ದರೆ :**
ದರಿದ್ರನಿಗೆ ಅಪಾರ ಸಂಪತ್ತು ದೊರಕುವುದು.

**120. ಹಲ್ಲಿ ಎಡದ ಕಪಾಳಕ್ಕೆ ಬಿದ್ದರೆ :**
ವಸ್ತ್ರ ಲಾಭವಾಗುವುದು.

**121. ಹಲ್ಲಿ ಎಡದ ಕೊರಳಿಗೆ ಬಿದ್ದರೆ :**
ಒಳ್ಳೆಯ ಭೋಜನ ದೊರೆಯುವುದು.

**122. ಹಲ್ಲಿ ಎಡದ ಕೊರಳಿಗೆ ಬಿದ್ದರೆ :**
ಚಿಂತೆ ಪರಿಹಾರವಾಗುವುದು.

**123. ಹಲ್ಲಿ ಕೊರಳ ಮೇಲೆ ಬಿದ್ದರೆ :**
ಅಲಂಕಾರ ವಸ್ತುಗಳು ದೊರೆಯುವುವು.

**124. ಹಲ್ಲಿ ಬಲದ ಕೊರಳಿಗೆ ಬಿದ್ದರೆ :**
ಮದುವೆಯಿಲ್ಲದವರಿಗೆ ಮದುವೆಯಾಗುವುದು.

**125. ಹಲ್ಲಿ ಬಲದ ತೋಳಿಗೆ ಬಿದ್ದರೆ :**
ಎಲ್ಲವೂ ಶುಭವೇ ಆಗುವುದು.

**126. ಹಲ್ಲಿ ಬಲದ ಮುಂಗೈಗೆ ಬಿದ್ದರೆ :**
ಬಲವಂತನಾಗುವನು.

**127. ಹಲ್ಲಿ ಎಡದ ಮುಂಗೈಗೆ ಬಿದ್ದರೆ :**
ಶತ್ರುಗಳು ಸಾಯುವರು.

**128. ಹಲ್ಲಿ ಬಲದ ಮುಂಗೈ ಹಾಗೂ ಮೊಳಕೈ ನಡುವೆ ಬಿದ್ದರೆ :**
ಮೃಷ್ಟಾನ್ನ ಭೋಜನ ದೊರೆಯುವುದು.

**129. ಹಲ್ಲಿ ಎಡದ ಅಂಗೈಗೆ ಬಿದ್ದರೆ :**
ಧನಲಾಭವಾಗುವುದು.

**130. ಹಲ್ಲಿ ಬಲದ ಹೆಬ್ಬೆರಳಿಗೆ ಬಿದ್ದರೆ :**
ದನಕರುಗಳು, ಕುರಿ-ಮೇಕೆಗಳು ಹೆಚ್ಚುವುದು.

**131. ಹಲ್ಲಿ ಬಲದ ಉಗುರುಗಳ ಮೇಲೆ ಬಿದ್ದರೆ :**
ಧನಲಾಭವಾಗುವುದು.

**132. ಹಲ್ಲಿ ಎದೆಯ ಮೇಲೆ ಬಿದ್ದರೆ :**
ಶುಭವಾಗುವುದು.

**133. ಹಲ್ಲಿ ಬಲದ ಮೊಲೆಗೆ ಬಿದ್ದರೆ :**
ಪುರುಷರಿಗೆ ಎಲ್ಲಾ ರೀತಿಯಿಂದಲೂ ಶುಭ ಆಗುವುದು. ಸ್ತ್ರೀಯರಿಗೆ ಗಂಡು ಮಗು ಹುಟ್ಟುವುದು.

**134. ಹಲ್ಲಿ ಸ್ತ್ರೀಯರ ಎಡದ ಮೊಲೆಯ ಮೇಲೆ ಬಿದ್ದರೆ :**
ಹೆಣ್ಣು ಮಗು ಹುಟ್ಟುವುದು.

**135. ಹಲ್ಲಿ ಹೊಟ್ಟೆಯ ಮೇಲೆ ಬಿದ್ದರೆ :**
ಮಕ್ಕಳಾಗುತ್ತವೆ.

**136. ಹಲ್ಲಿ ಹೊಕ್ಕಳಿನ ಮೇಲೆ ಬಿದ್ದರೆ :**
ಸಂತೋಷ ದೊರೆಯುವುದು.

**137. ಹಲ್ಲಿ ಪುರುಷರ ಎಡಕಂಕುಳ ಮೇಲೆ ಬಿದ್ದರೆ :**
ಸ್ತ್ರೀ ಸಂಭೋಗ ಸುಖ ದೊರೆಯುವುದು.

**138. ಹಲ್ಲಿ ಸ್ತ್ರೀಯರ ಎಡಕಂಕುಳ ಮೇಲೆ ಬಿದ್ದರೆ :**
ಗರ್ಭಿಣಿಯಾಗುವಳು.

**139. ಹಲ್ಲಿ ಕಿಬ್ಬೊಟ್ಟೆಯ ಮೇಲೆ ಬಿದ್ದರೆ :**
ಮಕ್ಕಳಾಗುವುವು.

**140. ಹಲ್ಲಿ ಸೊಂಟದ ಮೇಲೆ ಬಿದ್ದರೆ :**
ವಸ್ತ್ರ ಲಾಭವಾಗುವುದು.

**141. ಹಲ್ಲಿ ಕುಂಡಿಯ ಮೇಲೆ ಬಿದ್ದರೆ :**
ಸಿರಿವಂತಿಕೆ ಬರುವುದು.

**142. ಹಲ್ಲಿ ಬಲ ಕುಂಡಿಯ ಮೇಲೆ ಬಿದ್ದರೆ :**
ವಾಹನ ಲಾಭವಾಗುವುದು.

**143. ಹಲ್ಲಿ ಬಲ ತೊಡೆಯ ಮೇಲೆ ಬಿದ್ದರೆ :**
ಗಂಡು ಸಂತಾನವಾಗುವುದು.

**144. ಹಲ್ಲಿ ಎಡತೊಡೆಯ ಮೇಲೆ ಬಿದ್ದರೆ :**
ಹೆಣ್ಣು ಸಂತಾನವಾಗುವುದು.

**145. ಹಲ್ಲಿ ಹುಡುಗರಿಗೆ ಮೊಣಕಾಲ ಮೇಲೆ ಬಿದ್ದರೆ :**
ದೂರ ಪ್ರಯಾಣ ಮಾಡುವ ಯೋಗ ದೊರಕುವುದು.

**146. ಹಲ್ಲಿ ಮೊಣಕಾಲ ಸಂಧಿಯೊಳಗೆ ಬಿದ್ದರೆ :**
ಎಲ್ಲಾ ರೀತಿಯಿಂದಲೂ ಲಾಭವಾಗುವುದು.

**147. ಹಲ್ಲಿ ಎಡದ ಮೊಣಕಾಲ ಸಂಧಿನೊಳಗೆ ಬಿದ್ದರೆ :**
ವಾಹನ ಲಾಭವಾಗುವುದು.

**148. ಹಲ್ಲಿ ಬಲ ಮೀನು ಖಂಡದ ಮೇಲೆ ಬಿದ್ದರೆ :**
ಶುಭವಾಗುವುದು.

**149. ಹಲ್ಲಿ ಮೊಣಕಾಲ ಪರಟಿಯ ಮೇಲೆ ಬಿದ್ದರೆ :**
ಸುಂದರ ಪತ್ನಿ ದೊರಕುವಳು.

**150. ಹಲ್ಲಿ ಎಡದ ಕಣಕಾಲ ಮೇಲೆ ಬಿದ್ದರೆ :**
ಮದುವೆ ಆಗದವರಿಗೆ ಮದುವೆಯಾಗುವುದು.

**151. ಹಲ್ಲಿ ಬಲ ಹಿಮ್ಮಡಿಯ ಮೇಲೆ ಬಿದ್ದರೆ :**
ಮನೆಗೆ ಸ್ನೇಹಿತರು ಬರುವರು.

**152. ಹಲ್ಲಿ ಎಡ ಪಾದದ ಮೇಲೆ ಬಿದ್ದರೆ :**
ಶುಭವಾಗುವುದು.

**153. ಹಲ್ಲಿ ಬಲಗಾಲ ಮೇಲೆ ಬಿದ್ದರೆ :**
ಬಡವರಿಗೆ ಸಿರಿವಂತಿಕೆ ಬರುವುದು.

**154. ಹಾಸಿಗೆಯಿಂದ ಏಳುವಾಗ ಹಲ್ಲಿ ಮೇಲೆ ಬಿದ್ದರೆ :**
ಲಾಭವಾಗುವುದು.

**155. ಹಲ್ಲಿ ಪಾದದಿಂದ ಮೇಲಕ್ಕೆ ಹತ್ತಿದರೆ :**
ನೆನೆದ ಕಾರ್ಯಗಳು ಕೈಗೂಡುವುವು.

**156. ಹಲ್ಲಿ ಎಡಕ್ಕೆ ಬಿದ್ದು ಎಡಕ್ಕೆ ಹತ್ತಿದರೆ :**
ಶುಭವಾಗುವುದು.

**157. ಹಲ್ಲಿ ಬಲದಲ್ಲಿ ಬಿದ್ದು ಬಲಕ್ಕೆ ಏರಿದರೆ :**
ಉಡುಗೊರೆಗಳು ಬರುವವು.

**158. ಪ್ರಯಾಣ ಕಾಲದಲ್ಲಿ ಸ್ನೇಹಿತರು ಬಂಧುಗಳು ಹಿಂಬಾಲಿಸಿ ಬಂದರೆ :**
ಬೇಕಾದ ಸಹಾಯ ದೊರೆತು ಅನುಕೂಲವಾಗುವುದು.

# ಅಶುಭ ಶಕುನಗಳು

**1. ಪ್ರಯಾಣಕ್ಕೆ ಹೊರ ಹೊರಟಾಗ ಯಾರಾದರೂ ಇವತ್ತು ಹೋಗಬೇಡವೆಂದು ಹೇಳಿದರೆ :**

ಪ್ರಯಾಣ ಶುಭವಾಗಿರುವುದಿಲ್ಲ. ಕೆಲಸಗಳು ಹಾಳಾಗುತ್ತವೆ. ಧನ ವ್ಯಯವಾಗುತ್ತದೆ. ಕುಟುಂಬದಲ್ಲಿ ವಿರುಪೇರಾಗುತ್ತದೆ. ವೃಥಾ ಜಗಳ ಕಾಯಬೇಕಾಗಿ ಬರುವುದು, ಆರೋಗ್ಯ ಕೆಡುತ್ತದೆ. ಆಸ್ತಿ ನಷ್ಟವಾಗುವ ಸಂಭವವಿರುತ್ತದೆ. ಅಪಘಾತವಾಗುವ ಸಂಭವವಿರುತ್ತದೆ. ಶತ್ರುಗಳಿಂದ ತೊಂದರೆ ಬರುತ್ತದೆ. ಮಾನಹಾನಿಯಾಗುತ್ತದೆ.

**2. ಪ್ರಯಾಣಕ್ಕೆ ಹೊರ ಹೊರಟಾಗ ಯಾರಾದರೂ ಊಟ ಮಾಡಿಕೊಂಡು ಹೋಗೆಂದು ಹೇಳಿದರೆ :**

ವಿಘ್ನಗಳು ಉಂಟಾಗುತ್ತವೆ. ಪದವಿ ಕಳೆದುಕೊಳ್ಳುವ ಸಾಧ್ಯತೆ ಇರುತ್ತದೆ. ಶತ್ರುಗಳಿಂದ ಭಯವುಂಟಾಗುತ್ತದೆ..ಪೆಟ್ರೋಲ್, ವ್ಯಾಪಾರಿಗಳಿಗೆ, ಡಾಕ್ಟರ್, ಇಂಜನಿಯರ್‌ಗಳಿಗೆ ನಷ್ಟವಾಗುತ್ತದೆ. ಕೋರ್ಟ್ ವ್ಯವಹಾರದಲ್ಲಿ ಅಪಜಯ ಉಂಟಾಗುತ್ತದೆ. ಇತರರಿಂದ ಅವಮಾನ ಹೊಂದಬೇಕಾಗುತ್ತೆ.

**3. ಪ್ರಯಾಣಕ್ಕೆ ಹೊರ ಹೊರಟಾಗ ಯಾರಾದರೂ ನಾನೂ ನಿನ್ನೊಡನೆ ಬರುವೆನೆಂದು ಹೇಳಿದರೆ :**

ಎಷ್ಟೇ ಪ್ರಯತ್ನಿಸಿದರೂ ಕಾರ್ಯ ಸಫಲವಾಗುವುದಿಲ್ಲ. ದಂಡ ತೆರಬೇಕಾಗುತ್ತದೆ. ಆಸ್ತಿ ನಷ್ಟವಾಗುತ್ತದೆ. ಕುಟುಂಬದವರಿಂದ ಬೇರ್ಪಡೆಯಾಗುವ ಸಂಭವ ಉಂಟಾಗುತ್ತದೆ. ಸಂಬಂಧಿಕರಿಂದ ಅಶುಭವಾರ್ತೆ ಕೇಳಬೇಕಾಗಿ ಬರುವುದು. ಆರೋಗ್ಯ ಕೆಡುತ್ತದೆ. ಸಾಲ ಮಾಡಬೇಕಾದ ಪ್ರಸಂಗ ಬಂದುಬಿಡುತ್ತದೆ. ಸ್ನೇಹಿತರೊಡನೆ ವಿರೋಧ ಕಟ್ಟಿಕೊಳ್ಳಬೇಕಾಗಿ ಬರುವುದು.

4. **ಮನೆಯಿಂದ ಹೊರ ಹೊರಟಾಗ ಯಾರಾದರೂ ಎಲ್ಲಿಗೆ ಹೋಗುವೆಯೆಂದು ಕೇಳಿದರೆ :**

ಪಾಲುಗಾರಿಕೆಯ ವ್ಯಾಪಾರದಲ್ಲಿ ನಷ್ಟವಾಗುತ್ತದೆ. ಪತ್ನಿಯ ಜೊತೆ ಜಗಳವಾಡಬೇಕಾದ ಪರಿಸ್ಥಿತಿ ಬರುತ್ತದೆ. ಹಣ ವ್ಯಯವಾಗುತ್ತದೆ. ಆರೋಗ್ಯ ಕೆಡುತ್ತದೆ. ಮನೆಯಲ್ಲಿ ಅಶಾಂತಿ ಉಂಟಾಗುತ್ತದೆ. ಬೆಂಕಿ ಯಿಂದ, ವಾಹನದಿಂದ ಅಪಘಾತ ಸಂಭವಿಸುತ್ತದೆ. ಮಾನಹಾನಿ ಯಾಗುತ್ತದೆ. ಶತ್ರುಗಳಿಂದ ತೊಂದರೆ ಅನುಭವಿಸಬೇಕಾಗಿ ಬರುತ್ತದೆ. ವ್ಯಾಪಾರಿಗಳಿಗೆ ಹೆಚ್ಚು ನಷ್ಟವಾಗುತ್ತದೆ.

5. **ಪ್ರಯಾಣಕ್ಕೆಂದು ಮನೆಯಿಂದ ಹೊರ ಹೊರಟಾಗ ಹೊಗೆಯಾಡುವ ಬೆಂಕಿ ಕಂಡುಬಂದರೆ :**

ತೊದರೆಗಳ ಸರಮಾಲೆಯೇ ಎದುರಾಗುವುದು, ಮನೆಯಲ್ಲಿ ಅಶಾಂತಿ ಉಂಟಾಗುವುದು, ಸ್ತ್ರೀ ಮೂಲಕ ಹಣ ವ್ಯಯವಾಗುವುದು. ಆಯುಧಗಳಿಂದ ಗಾಯ ಉಂಟಾಗುವುದು. ಅಪಘಾತವಾಗುವ ಸಂಭವ ಇರುವುದು. ಪ್ರಯತ್ನಿಸಿದ ಕಾರ್ಯದಲ್ಲೆಲ್ಲಾ ಅಪಜಯ ಉಂಟಾಗುವುದು. ರೋಗಗಳು ಕಾಡುವುವು. ವ್ಯಾಪಾರಿಗಳಿಗೆ ಅತೀವ ನಷ್ಟ ಉಂಟಾಗು ವುದು.

6. **ಮನೆಯಿಂದ ಹೊರ ಹೊರಟಾಗ ಎಣ್ಣೆ ಕಂಡುಬಂದರೆ :**

ಪ್ರಯತ್ನಿಸಿದ ಕಾರ್ಯದಲ್ಲಿ ಅಪಜಯವುಂಟಾಗುವುದು. ಅಶುಭವಾರ್ತೆ ಕೇಳಲು ದೊರೆಯುವುದು. ಮಂಗಳ ಕಾರ್ಯಕ್ಕೆ ಅಡ್ಡಿ ಉಂಟಾಗುವುದು, ಮಾನಸಿಕ ಒತ್ತಡ ಉದ್ಭವಿಸುವುದು, ಪದವಿಯನ್ನು ಕಳೆದುಕೊಳ್ಳಬೇಕಾಗಿ ಬರುವುದು. ಅಗ್ನಿ, ಆಯುಧ, ವಾಹನ, ವಿಷ ವಸ್ತುಗಳಿಂದ ಅಪಘಾತ ಸಂಭವಿಸಬಹುದು, ರೋಗಗಳು ಗುಣವಾಗುವುದಿಲ್ಲ, ಜೂಜಿನಲ್ಲಿ ಸೋಲಾಗುವುದು.

**7. ಮನೆಯಿಂದ ಹೊರ ಹೊರಟಾಗ ವಿಧವೆ ಎದುರಾದರೆ :**

ದಾಂಪತ್ಯ ಜೀವನದಲ್ಲಿ ವಿರಸವುಂಟಾಗುವುದು. ಕೋರ್ಟ್ ವ್ಯವಹಾರದಲ್ಲಿ ಅಪಜಯ ಉಂಟಾಗುವುದು. ಮನೆಯಲ್ಲಿ ಅಮಂಗಳ ಕಾರ್ಯ ನಡೆಯುವುದು. ಪ್ರಯಾಣದಿಂದ ತೊಂದರೆ ಉಂಟಾಗುವುದು. ಆರೋಗ್ಯ ಹದಗೆಡುವುದು. ವ್ಯಾಪಾರದಲ್ಲಿ ಚೇತರಿಸಿಕೊಳ್ಳಲಾರದಷ್ಟು ನಷ್ಟ ಉಂಟಾಗುವುದು. ಶತ್ರುಗಳು ತೊಂದರೆ ಕೊಡುವರು, ಧನಹಾನಿ ಯಾಗುವುದು. ಬೆಲೆ ಬಾಳುವ ವಸ್ತುಗಳನ್ನು ಕಳೆದುಕೊಳ್ಳಬೇಕಾಗಿ ಬರುವುದು.

**8. ಮನೆಯಿಂದ ಹೊರ ಹೊರಟಾಗ ಹೊಸ ಮಡಿಕೆ ಎದುರಾದರೆ :**

ಕಾರ್ಯಗಳು ಕೈಗೂಡುವುದಿಲ್ಲ, ಅಶುಭ ವಾರ್ತೆಗಳು ಕೇಳಬೇಕಾಗಿ ಬರುವುದು, ವ್ಯರ್ಥವಾಗಿ ಹಣ ಕಳೆದುಕೊಳ್ಳಬೇಕಾಗಿ ಬರುವುದು, ಅನಾರೋಗ್ಯ ಉಂಟಾಗುವುದು. ಅಕ್ಕಪಕ್ಕದವರೊಡನೆ ವೈರತ್ವ ಕಟ್ಟಿಕೊಳ್ಳಬೇಕಾಗುವುದು, ಅಧಿಕಾರ ಕಳೆದುಕೊಳ್ಳಬೇಕಾಗುವುದು. ವ್ಯಾಪಾರಿಗೆ ನಷ್ಟ ಉಂಟಾಗುವುದು, ಮಿತ್ರರು ಶತ್ರುಗಳಾಗುವರು. ಇತರರಿಂದ ನಿಂದನೆ ಕೇಳಬೇಕಾಗಿ ಬರುವುದು.

**9. ಮನೆಯಿಂದ ಹೊರ ಹೊರಟಾಗ ಹೊಸ ಗೂಡೆ ಎದುರಾದರೆ :**

ಅಭಿವೃದ್ಧಿಗೆ ಅಡಚಣೆ ಉಂಟಾಗುತ್ತದೆ. ಪತ್ನಿಯ ಜೊತೆ ಜಗಳವಾಡುವ ಸಂದರ್ಭ ಒದಗುತ್ತದೆ. ಪ್ರಯತ್ನಿಸಿದ ಕಾರ್ಯದಲ್ಲಿ ಜಯ ದೊರಕುವುದಿಲ್ಲ, ಆಸ್ತಿ ನಷ್ಟವಾಗುತ್ತದೆ. ವ್ಯಾಪಾರದಲ್ಲಿ ನಷ್ಟ ಉಂಟಾಗುವುದು. ಕೋರ್ಟ್ ವ್ಯವಹಾರದಲ್ಲಿ ಅಪಜಯ ಉಂಟಾಗುತ್ತದೆ. ಸಂಬಂಧಿಕರಿಂದ ನಿಷ್ಠುರ ಮಾತುಗಳನ್ನು ಕೇಳಬೇಕಾಗುವುದು. ವಾಹನ ಅಪಘಾತ ಸಂಭವಿಸುವುದು. ಮಕ್ಕಳ ಆರೋಗ್ಯ ಕೆಡುವ ಸೂಚನೆ ಇರುವುದು.

**10. ಮನೆಯಿಂದ ಹೊರ ಹೊಟಾಗ ಸೌದೆ ಎದುರಾದರೆ :**

ಪ್ರಯತ್ನಗಳು ಸಫಲವಾಗುವುದಿಲ್ಲ. ಮಾನಸಿಕ ಸಂತುಲನ ಕಳೆದುಕೊಳ್ಳಬೇಕಾಗಿ ಬರುವುದು. ಅಶುಭವಾರ್ತೆ ಸಂಬಂಧಿಕರಿಂದ ಕೇಳಲು ದೊರೆಯುವುದು. ದಾಂಪತ್ಯ ಜೀವನ ಸುಖಮಯ ವಾಗಿರುವುದಿಲ್ಲ. ಅಧಿಕಾರಿಗಳಿಂದ ತೊಂದರೆ ಅನುಭವಿಸಬೇಕಾಗಿ ಬರುತ್ತದೆ. ಆಸ್ತಿ ನಷ್ಟವಾಗುತ್ತದೆ. ವ್ಯಾಪಾರದಲ್ಲಿ ನಷ್ಟ ಮಗನ ಜೊತೆ ಜಗಳವಾಗುತ್ತದೆ. ಆರೋಗ್ಯ ಹದಗೆಡುವುದು. ಸ್ನೇಹಿತರು ಶತ್ರುಗಳಾಗುವರು. ಮರಣ ಕೇಳಬೇಕಾಗಿ ಬರುವುದು.

**11. ಮನೆಯಿಂದ ಹೊರ ಹೊರಟಾಗ ಹಗ್ಗಗಳು ಎದುರಾದರೆ :**

ನಿಷ್ಠೂರದ ಮಾತುಗಳನ್ನು ಕೇಳಬೇಕಾಗಿ ಬರುವುದು. ದುಷ್ಟರ ಸಹವಾಸ ಮಾಡಬೇಕಾಗಿ ಬಂದು ಮಾನಹಾನಿಯಾಗುವವು. ಮನೆಯಲ್ಲಿ ಅಶಾಂತಿ ಉತ್ಪನ್ನವಾಗುವುದು. ವೃಥಾ ಹಣ ಕಳೆದುಕೊಳ್ಳಬೇಕಾದ ಪರಿಸ್ಥಿತಿ ಬರುವುದು. ರಾಜಕಾರಣಿಗಳಿಗೆ, ಸರ್ಕಾರಿ ನೌಕರರಿಗೆ ಅಪಕೀರ್ತಿ ಬರುವುದು, ವ್ಯಾಪಾರಿಗಳಿಗೆ ವ್ಯಾಪಾರ ಚೆನ್ನಾಗಿ ನಡೆಯುವುದಿಲ್ಲ. ಕೋರ್ಟ್ ವ್ಯವಹಾರದಲ್ಲಿ ಅಪಜಯ ಉಂಟಾಗುವುದು.

**12. ಮನೆಯಿಂದ ಹೊರ ಹೊರಟಾಗ ಪೊರಕೆಗಳು ಎದುರಾದರೆ :**

ಅಧಿಕಾರಿಗಳಿಂದ ತೊಂದರೆ ಉಂಟಾಗುವುದು. ಪ್ರಯಾಣದಿಂದ ನಷ್ಟವಾಗುವುದು. ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಪಾಸಾಗುವುದಿಲ್ಲ. ವ್ಯಾಪಾರಿಗಳಿಗೆ ನಷ್ಟ ಹೆಚ್ಚು. ವೈವಾಹಿಕ ಜೀವನ ಸುಖಮಯವಾಗಿರಲಾರದು. ಶತ್ರುಗಳಿಂದ ತೊಂದರೆಯಾಗುವುದು, ಮಾನಹಾನಿಯಾಗುವುದು.

**13. ಮನೆಯಿಂದ ಹೊರ ಹೊರಟಾಗ ಗುದ್ದಲಿ ಎದುರಾದರೆ :**

ಆರೋಗ್ಯ ಹದಗೆಡುವುದು. ಸಂಸಾರದಲ್ಲಿ ಜಗಳ ಪ್ರಾರಂಭವಾಗ್ತು

ವುದು. ಅಭಿವೃದ್ಧಿಗೆ ತೊಂದರೆಯಾಗುವುದು. ಸ್ಥಿರ ಆಸ್ತಿಯಲ್ಲಿ ನಷ್ಟವಾಗುವುದು. ಜೈಲುವಾಸ ಅನುಭವಿಸಬೇಕಾಗುವುದು. ಕೋರ್ಟಿನ ವ್ಯವಹಾರದಲ್ಲಿ ಗೆಲುವು ದೊರೆಯುವುದಿಲ್ಲ. ಜೀವನದ ನೆಮ್ಮದಿ ಹಾಳಾಗುವುದು.

**14. ಮನೆಯಿಂದ ಹೊರ ಹೊರಟಾಗ ಕೊಡಲಿ ಎದುರಾದರೆ :**

ಅಧಿಕಾರಿಗಳಿಂದ, ಅಕ್ಕಪಕ್ಕದವರಿಂದ ವೈರತ್ವ ಕಟ್ಟಿಕೊಳ್ಳಬೇಕಾಗಿ ಬರುವುದು. ಕೆಟ್ಟ ವಾರ್ತೆ ಕೇಳಬೇಕಾಗಿ ಬರುವುದು. ಪ್ರಯಾಣದಲ್ಲಿ ನಷ್ಟವಾಗುವುದು. ಜೀವನೋಪಾಯಕ್ಕೆ ಬಹಳ ತೊಂದರೆಯಾಗುವುದು, ವ್ಯಾಪಾರಿಗಳಿಗೆ ನಷ್ಟವಾಗುವುದು. ಹೊಡೆದಾಟದಿಂದ ಶರೀರಕ್ಕೆ ಪೆಟ್ಟು ಬೀಳುವುದು.

**15. ಮನೆಯಿಂದ ಹೊರ ಹೊರಟಾಗ ಆಯುಧಗಳು ಎದುರಾದರೆ :**

ಪಾಲುಗಾರಿಕೆ ವ್ಯಾಪಾರದಲ್ಲಿ ಜಗಳ ಉಂಟಾಗುವುದು. ಧನಹಾನಿ, ಮಾನಹಾನಿಯಾಗುವುದು. ವಾಹನ ಅಪಘಾತವಾಗುವುದು. ಬಂಧು ಗಳಿಂದ ತೊಂದರೆ ಬರುವುದು. ಮನೆಯಲ್ಲಿ ಅಶಾಂತಿ ಏರ್ಪಡುವುದು. ಆರೋಗ್ಯ ಹದಗೆಡುವುದು.

**16. ಮನೆಯಿಂದ ಹೊರ ಹೊರಟಾಗ ಕುಂಟನು ಎದುರಾದರೆ :**

ಪ್ರಯತ್ನಿಸಿದ ಕಾರ್ಯದಲ್ಲಿ ಸಫಲತೆ ದೊರಕುವುದಿಲ್ಲ. ಹಣ ನಷ್ಟವಾಗುತ್ತದೆ. ಪ್ರಯಾಣದಿಂದ ಚಿಂತೆ ಉತ್ಪನ್ನವಾಗುತ್ತದೆ. ಕೆಲವರಿಗೆ ಸಂಸಾರದಲ್ಲಿ ಬೇರ್ಪಡೆ ಸಂಭವವಿದೆ. ಆರೋಗ್ಯ ಹದಗೆಡುವುದು. ಪ್ರೇಮಿಗಳಿಗೆ ಅಪಜಯ ಉಂಟಾಗುವುದು. ವ್ಯಾಪಾರಿಗಳಿಗೆ ಹೆಚ್ಚು ನಷ್ಟವಾಗುತ್ತದೆ.

**17. ಮನೆಯಿಂದ ಹೊರ ಹೊರಟಾಗ ಕುರುಡನು ಎದುರಾದರೆ :**

ಜೀವನೋಪಾಯಕ್ಕೆ ಧಕ್ಕೆ ಉಂಟಾಗುವುದು. ಆರೋಗ್ಯ

ಹದಗೆಡುವುದು. ಮನಸ್ಸಿಗೆ ನೆಮ್ಮದಿ ಇರುವುದಿಲ್ಲ, ಹೆಂಡತಿ ಮಕ್ಕಳಿಗೆ ಆರೋಗ್ಯ ಕೆಡುವುದು, ಅಪಕೀರ್ತಿ ಉಂಟಾಗುವುದು. ಶತ್ರುಗಳಿಂದ ತೊಂದರೆ ಉಂಟಾಗುವುದು, ಕೋರ್ಟಿಗೆ ವೃಥಾ ಅಲೆದಾಡಬೇಕಾಗುವುದು.

**18. ಮನೆಯಿಂದ ಹೊರ ಹೊರಟಾಗ ಮೂಗಿಯು ಎದುರಾದರೆ :**

ಪ್ರಯಾಣದಿಂದ ವೃಥಾ ನಷ್ಟ ಅನುಭವಿಸಬೇಕಾಗಿ ಬರುವುದು. ವಿವಾಹ ಜೀವನ ಸುಖವಾಗಿರುವುದಿಲ್ಲ, ಅನಾವಶ್ಯಕ ಪ್ರಯಾಣ ಮಾಡಬೇಕಾಗಿ ಬಂದು ಹಣ ನಷ್ಟವಾಗುವುದು. ಕೋರ್ಟ್ ವ್ಯವಹಾರದಲ್ಲಿ ಅಪಜಯ ಉಂಟಾಗುವುದು, ಪ್ರಯತ್ನಿಸಿದ ಕಾರ್ಯದಲ್ಲಿ ಸಫಲತೆ ದೊರಕುವುದಿಲ್ಲ.

**19. ಮನೆಯಿಂದ ಹೊರ ಹೊರಟಾಗ ಸನ್ಯಾಸಿಯು ಎದುರಾದರೆ :**

ಖರ್ಚು ಹೆಚ್ಚಾಗುವುದು. ಸಂಸಾರದಿಂದ ಬೇರ್ಪಡೆಯಾಗಬೇಕಾಗುವುದು. ಅಶುಭ ವಾರ್ತೆಯನ್ನು ಕೇಳಬೇಕಾಗಿ ಬರುವುದು. ಪದವಿಯನ್ನು ಕಳೆದುಕೊಳ್ಳಬೇಕಾಗಿ ಬರುವುದು, ಜೀವನದಲ್ಲಿ ನಿರುತ್ಸಾಹ ಉಂಟಾಗುವುದು. ಮೃತ್ಯುಭಯ ಉಂಟಾಗುವುದು.

**20. ಮನೆಯಿಂದ ಹೊರ ಹೊರಟಾಗ ನಾಮಧಾರಿ ಒಂಟಿ ಬ್ರಾಹ್ಮಣ ಎದುರಾದರೆ :**

ಯಾವುದೇ ಕೆಲಸಗಳು ಕೈಗೂಡುವುದಿಲ್ಲ. ಮನದಲ್ಲಿ ಚಿಂತೆ ಮೂಡುವುದು, ವ್ಯಾಪಾರಿಗಳಿಗೆ ಹೆಚ್ಚು ನಷ್ಟವಾಗುವುದು. ಅಗ್ನಿಯಿಂದ, ವಾಹನಗಳಿಂದ ಅಪಘಾತವಾಗುವ ಸಂಭವವುಂಟು. ಕೋರ್ಟ್ ವ್ಯವಹಾರದಲ್ಲಿ ಅಪಜಯ ಅನುಭವಿಸಬೇಕಾಗುವುದು. ವೃಥಾ ದೋಷಾರೋಪಣೆ ಉಂಟಾಗುವುದು, ಶುಭ ಸಮಾರಂಭಗಳಿಗೆ ಅಡಚಣೆ ಉಂಟಾಗುವುದು. ಮಾನನಷ್ಟವಾಗುವುದು.

**21. ಮನೆಯಿಂದ ಹೊರ ಹೊರಟಾಗ ಕುಂಟನಾಯಿ ಎದುರಾದರೆ :**

ಶತ್ರುಗಳಿಂದ ತೊಂದರೆಯಾಗುವುದು, ಬಂಧುಗಳು ದೂರ ಸರಿಯುವರು. ಪತ್ನಿಯೊಡನೆ ಜಗಳ ಸಂಭವಿಸುವುದು. ಅಭಿವೃದ್ಧಿಗೆ ತೊಂದರೆಯುಂಟಾಗುವುದು, ದಂಡ ತೆರಬೇಕಾಗುವುದು. ಆಸ್ತಿ ನಷ್ಟವಾಗುವುದು, ವ್ಯಾಪಾರಿಗಳಿಗೆ ಹೆಚ್ಚು ನಷ್ಟವಾಗುವುದು. ಆರೋಗ್ಯ ಹದಗೆಡುವುದು.

**22. ಮನೆಯಿಂದ ಹೊರ ಹೊರಟಾಗ ಭಿಕ್ಷುಕ ಎದುರಾದರೆ :**

ವಿನಾಕಾರಣ ಹಣ ವ್ಯಯವಾಗುವುದು. ಸ್ನೇಹಿತರ ಜೊತೆ ಜಗಳವಾಡಬೇಕಾದ ಸಂದರ್ಭ ಬರುವುದು. ಕೋರ್ಟಿನ ವ್ಯವಹಾರದಲ್ಲಿ ಸೋಲುಂಟಾಗುವುದು. ಚಂಚಲ ಮನಸ್ಸುಂಟಾಗುವುದು. ಕೆಲಸವನ್ನು ಕಳೆದುಕೊಳ್ಳಬೇಕಾಗಿ ಬರುವುದು. ಮಕ್ಕಳಿಂದ ದೂರವಾಗುವ ಸಾಧ್ಯತೆಗಳಿವೆ.

**23. ಮನೆಯಿಂದ ಹೊರ ಹೊರಟಾಗ ಕಣ್ಣು ಬೇನೆಯವನು ಎದುರಾದರೆ :**

ಪ್ರಯಾಣದಿಂದ ನಷ್ಟ ಸಂಭವಿಸುವುದು. ಪತ್ನಿಗೆ ಅನಾರೋಗ್ಯವಾಗುವುದು. ಆರೋಗ್ಯ ಹದಗೆಡುವುದು, ಹಣ ವ್ಯಯವಾಗುವುದು. ಅಶುಭ ವಾರ್ತೆ ಕೇಳಲು ದೊರೆಯುವುದು. ವ್ಯಾಪಾರದಲ್ಲಿ ಅಪಾರ ನಷ್ಟವಾಗುವುದು.

**24. ಮನೆಯಿಂದ ಹೊರ ಹೊರಟಾಗ ಅಳುವವರು ಎದುರಾದರೆ :**

ಅಶುಭ ವಾರ್ತೆಯನ್ನು ಕೇಳಬೇಕಾಗಿ ಬರುವುದು, ಆಸ್ತಿ ನಷ್ಟವಾಗುವುದು. ಶತ್ರುಗಳಿಂದ ತೊಂದರೆ ಉಂಟಾಗುವುದು. ಅಭಿವೃದ್ಧಿಯಾಗುವುದಿಲ್ಲ. ವಿಷವಸ್ತು ಅಗ್ನಿಯಿಂದ, ವಾಹನ, ಆಯುಧಗಳಿಂದ ಅಪಘಾತ ಸಂಭವಿಸುವುದು. ಕಳ್ಳತನ ಆಗುವ ಸಂಭವವಿರುವುದು.

**25. ಮನೆಯಿಂದ ಹೊರ ಹೊರಟಾಗ ಜಾರಿ ಬಿದ್ದರೆ :**

ಪ್ರಯಾಣ ಅರ್ಧಕ್ಕೆ ನಿಂತುಹೋಗುವುದು. ಅಪಘಾತ ಸಂಭವಿಸುವುದು. ಆರೋಗ್ಯ ಹದಗೆಡುವುದು. ವ್ಯಾಪಾರದಲ್ಲಿ ನಷ್ಟ ಉಂಟಾಗುವುದು. ಕೋರ್ಟ್ ವ್ಯವಹಾರದಲ್ಲಿ ಅಪಜಯ ಉಂಟಾಗುವುದು. ಮಾನ ಕಳೆದುಕೊಳ್ಳಬೇಕಾಗಿ ಬರುವುದು.

**26. ಮನೆಯಿಂದ ಹೊರ ಹೊರಟಾಗ ಮುಗ್ಗರಿಸಿದರೆ :**

ಕೆಟ್ಟ ವಾರ್ತೆಗಳನ್ನು ಕೇಳಬೇಕಾಗಿ ಬರುವುದು. ಸ್ಥಿರ ಆಸ್ತಿ ನಷ್ಟವಾಗುವುದು. ಶತ್ರುಗಳಿಂದ ತೊಂದರೆ ಆಗುವುದು. ಮನಸ್ಸಿಗೆ ನೆಮ್ಮದಿ ದೊರಕುವುದಿಲ್ಲ. ವಿನಾಕಾರಣ ಧನ ಹಾನಿಯಾಗುವುದು. ಮಿತ್ರರು ಶತ್ರುಗಳಾಗುವರು.

**27. ಪ್ರಯಾಣಕ್ಕೆ ಹೊರ ಹೊರಟಾಗ ಎದುರಿಗೆ ನಾಯಿ ಮೂಳೆಯನ್ನು ಕಚ್ಚಿಕೊಂಡು ಬಂದರೆ :**

ನೆನೆಸಿದ ಕಾರ್ಯಗಳು ಈಡೇರುವುದಿಲ್ಲ. ಬಂಧುಗಳು ದೂರ ಸರಿಯುವರು. ವ್ಯಾಧಿಗಳು ತಲೆದೋರುವವು. ಜೀವನೋಪಾಯಕ್ಕೆ ಧಕ್ಕೆ ಉಂಟಾಗುವುದು. ಹಣಕಾಸಿನ ಮುಗ್ಗಟ್ಟು ಉಂಟಾಗುವುದು. ಆಸ್ತಿ ನಷ್ಟವಾಗುವುದು. ಮಿತ್ರರು ಶತ್ರುಗಳಾಗುವರು. ವೃಥಾ ದೋಷಾರೋಪಣೆ ಕೇಳಬೇಕಾಗಿ ಬರುವುದು.

**28. ನಾಯಿ ಬಳ್ಳಿಯನ್ನಾಗಲಿ ಹಗ್ಗವನ್ನಾಗಲೀ ಕಚ್ಚಿಕೊಂಡು ಎದುರಿಗೆ ಬಂದರೆ :**

ಪ್ರಯತ್ನಿಸಿದ ಕಾರ್ಯಗಳು ವಿಫಲವಾಗುವವು. ಸಂಬಂಧಿಕರೊಡನೆ ಜಗಳ ಆಗುವುದು. ಮಕ್ಕಳಿಗೆ ಅನಾರೋಗ್ಯ ಉಂಟಾಗುವುದು. ಮನೆಯ ಯಜಮಾನ ಗಂಡಾಂತರಕ್ಕೆ ಸಿಲುಕಬೇಕಾಗುವುದು.

**29. ನಾಯಿ ಕಿವಿಯನ್ನು ಅಲ್ಲಾಡಿಸುತ್ತಾ ಮೈಮೇಲೆ ಬಂದರೆ ಅಥವಾ ಕಾಲುಗಳನ್ನು ಮುದ್ದಾಡಿದರೆ :**

ಪ್ರಯಾಣ ಅರ್ಧದಲ್ಲಿಯೇ ನಿಂತು ಹೋಗುವುದು.

**30. ನಾಯಿ ಮನೆಯ ಹೊಸ್ತಿಲ ಮೇಲೆ ನಿಂತು ಬಾಯಿಯನ್ನು ಯಜಮಾನನ ಹೆಂಡತಿಯ ಮೇಲಿಟ್ಟರೆ :**

ಮನೆಯವರಿಗೆ ರೋಗ ರುಜಿನಗಳು ತಗಲುವುವು.

**31. ನಾಯಿ ಮನೆಯೊಳಗೆ ನಿಂತು ತಲೆಯನ್ನು ಹೊರಗೆ ಇಟ್ಟರೆ :**

ಮನೆಯ ಯಜಮಾನನಿಗೆ ಇಲ್ಲದ ಕಷ್ಟಗಳು ಬರುವವು.

**32. ಊರಿನ ಮಧ್ಯೆ ನಿಂತು ಸೂರ್ಯನ ಕಡೆ ಮುಖ ಮಾಡಿ ನಾಯಿ ಬೊಗಳುತ್ತಿದ್ದರೆ :**

ದೇಶಕ್ಕೆ ಕೇಡು ಉಂಟಾಗುವುದು.

**33. ಮುಂಜಾನೆ ನಾಯಿ ಬೊಗಳುತ್ತಿದ್ದರೆ :**

ಅಗ್ನಿ ಅಪಘಾತ ಉಂಟಾಗುವುದು.

**34. ನಾಯಿ ಊರಿನ ಮಧ್ಯೆ ಬೊಗಳಿ ಹಾಗೇ ಸ್ಮಶಾನದಲ್ಲಿ ಹೋಗಿ ಬೊಗಳಿದರೆ :**

ದೇಶದ ಅಥವಾ ಊರಿನ ದೊಡ್ಡ ಮನುಷ್ಯರಿಗೆ ಗಂಡಾಂತರ ಬರುವುದು.

**35. ನಾಯಿ ತಿಪ್ಪೆಯ ಮೇಲೆ ಅಥವಾ ಮನೆಯ ಮೇಲೆ ನಿಂತು ದೀರ್ಘಸ್ವರದಿಂದ ಕೂಗುತ್ತಿದ್ದರೆ :**

ಈ ವರ್ಷ ಮಳೆಗಾಲದಲ್ಲಿ ದೊಡ್ಡ ಮಳೆ ಸುರಿಯುವುದು.

**36. ನಾಯಿ ಚಳಿಗಾಲ ಅಥಛವಾ ಬೇಸಿಗೆಯ ಕಾಲದಲ್ಲಿ ಕೂಗಿದರೆ :**

ಬೆಂಕಿಯಿಂದಾಗಲೀ ಅಥವಾ ಯಾವುದೇ ರೋಗದಿಂದಾಗಲೀ ಪ್ರಜೆಗಳಿಗೆ ಕಷ್ಟವಾಗುವುದು.

37. ನಾಯಿಯು ನೀರಿನಲ್ಲಿ ಆಟವಾಡುತ್ತಿದ್ದರೆ :
ಈ ವರ್ಷ ಬೇಗನೆ ಮಳೆ ಸುರಿಯುವುದು.

38. ಹಾಲಕ್ಕಿ ಅಗ್ನಿ ದಿಕ್ಕಿಗೂ, ಉತ್ತರ ದಿಕ್ಕಿಗೂ ಹಾಗೂ ಈಶಾನ್ಯ ದಿಕ್ಕಿಗೂ ನುಡಿದರೆ :
ದೇಶಕ್ಕೆ ಕೇಡುಂಟಾಗುವುದು.

39. ಹಾಲಕ್ಕಿ ಒಂದನೇ ಜಾವದಲ್ಲಿ ಎಡಭಾಗದಲ್ಲಿ ನುಡಿದರೆ :
ಪ್ರಯಾಣಕ್ಕೆ ಹಾನಿ ಉಂಟಾಗುವುದು.

40. ಹಾಲಕ್ಕಿ ಒಂದನೇ ಜಾವದಲ್ಲಿ ಎದುರಿನಲ್ಲಿ ನುಡಿದರೆ :
ಪ್ರಯಾಣಕ್ಕೆ ಕೇಡುಂಟಾಗುವುದು.

41. ಹಾಲಕ್ಕಿ ಎರಡನೇ ಜಾವದಲ್ಲಿ ಬಲಭಾಗದಲ್ಲಿ ನುಡಿದರೆ :
ಅಪಾಯದ ಭಯ ತಲೆದೋರುವುದು.

42. ಹಾಲಕ್ಕಿ ಎರಡನೇ ಜಾವದಲ್ಲಿ ಎದುರಿನಲ್ಲಿ ನುಡಿದರೆ :
ಪ್ರಯಾಣ ನಿಂತುಹೋಗುವುದು.

43. ಹಾಲಕ್ಕಿ ಎರಡನೇ ಜಾವದಲ್ಲಿ ಹಿಂಭಾಗದಲ್ಲಿ ನುಡಿದರೆ :
ಕಲಹ ಉಂಟಾಗುವುದು.

44. ಹಾಲಕ್ಕಿ ಮೂರನೇ ಜಾವದಲ್ಲಿ ಹಿಂಭಾಗದಲ್ಲಿ ನುಡಿದರೆ :
ಜಗಳ ಉಂಟಾಗುವುದು.

45. ಹಾಲಕ್ಕಿ ನಾಲ್ಕನೇ ಜಾವದಲ್ಲಿ ಹಿಂಭಾಗದಲ್ಲಿ ನುಡಿದರೆ :
ವ್ಯಸನ ಉಂಟಾಗುತ್ತದೆ.

46. ಎರಡು ಹಾವುಗಳು ಜಗಳವಾಡುವುದನ್ನು ನೋಡಿದರೆ :
ಆಪ್ತರಲ್ಲಿ ವಿರೋಧ ಉಂಟಾಗುತ್ತದೆ.

47. ಎರಡು ಹಾವುಗಳು ಜೊತೆಯಾಗಿ ಒಂದು ಕಡೆಗೆ ಹೋಗುತ್ತಿರುವುದನ್ನು ನೋಡಿದರೆ :
ದರಿದ್ರತೆ ಬರುತ್ತದೆ.

48. ಒಂದು ಹಾವು ಮತ್ತೊಂದು ಹಾವನ್ನು ನುಂಗುತ್ತಿರುವುದನ್ನು ನೋಡಿದರೆ :
ಬರ ಬರುವುದು.

49. ಹಾವು ಪಕ್ಕದಿಂದ ತಪ್ಪಿಸಿಕೊಂಡು ಹೋಗುತ್ತಿರುವುದನ್ನು ನೋಡಿದರೆ :
ಬಡತನ ಬರುವುದು.

50. ಹಾವು ಎಡಪಕ್ಕದಲ್ಲಿ ಬರುವುದನ್ನು ನೋಡಿದರೆ :
ಕೇಡು ಉಂಟಾಗುವುದು.

51. ಹಾವು ಸತ್ತು ಬೀಳುವುದನ್ನು ನೋಡಿದರೆ :
ಮರಣವಾರ್ತೆ ಕೇಳಬೇಕಾಗಿ ಬರುವುದು.

52. ಹಾವು ಎಡಗಡೆ ಕೂಗಿದರೆ:
ಕೇಡುಂಟಾಗುವುದು.

53. ಓತಿಕೇತ ಶ್ರೀಮಂತರ ಮೇಲೆ ಬಿದ್ದರೆ :
ಧನಹಾನಿಯಾಗುವುದು.

54. ಓತಿಕೇತ ಎರಡು ಪಾದಗಳನ್ನೇರಿದರೆ :
ಜೈಲುವಾಸ ಅನುಭವಿಸಬೇಕಾಗುವುದು.

55. ಓತಿಕೇತ ಮೊಣಕಾಲ ಮೇಲೇರಿದರೆ :
ಕಳ್ಳತನವಾಗುವುದು.

56. ಓತಿಕೇತ ನಡುವಿಗೆ ಏರಿದರೆ :
ಖಾಯಿಲೆ ಬರುವುದು.

57. ಓತಿಕೇತ ಭುಜಕ್ಕೆ ಏರಿದರೆ :
ಹಾನಿ ಉಂಟಾಗುವುದು.

58. ಓತಿಕ್ಯಾತ ಶರೀರಕ್ಕೇರಿದರೆ :
ಮರಣ ಉಂಟಾಗುವುದು.

**59. ವೊಣ್ಣೇಕೀತ ಕಂಠದ ಮೇಲೆ ಬಿದ್ದರೆ :**
ಮರಣ ಪ್ರಾಪ್ತಿಯಾಗುವುದು.

**60. ವೊಣ್ಣೇಕೀತ ಕೈಗೆ ಬಿದ್ದರೆ :**
ಸ್ನೇಹಿತರಿಗೆ ವಿಪತ್ತು ಬರುವುದು.

**61. ವೊಣ್ಣೇಕೀತ ತೊಡೆಗಳ ಮೇಲೆ ಅಂಗಗಳ ಮೇಲೆ ಬಿದ್ದರೆ :**
ಹೇರಳ ನಷ್ಟ ಉಂಟಾಗುವುದು.

**62. ವೊಣ್ಣೇಕೀತ ಬಲಹೆಜ್ಜೆಯ ಮೇಲೆ ಬಿದ್ದರೆ :**
ಬಡತನ ಪ್ರಾಪ್ತಿಯಾಗುವುದು.

**63. ವೊಣ್ಣೇಕೀತ ಕಡಿದರೆ:**
ರೋಗ ಪ್ರಾಪ್ತಿಯಾಗುವುದು.

**64. ಮನೆಯಲ್ಲಿ ಜೇನುಹುಳ ಗೂಡು ಕಟ್ಟಿದರೆ :**
ಮನೆಯವರಿಗೆ ಒಬ್ಬರಿಗಾದರೂ ರೋಗ ಬರುವುದು ಹಾಗೂ ಸ್ಥಳ ಭಂಗವಾಗುವುದು.

**65. ಕಾಗೆ ಮನೆ ಹೊಕ್ಕರೆ**
ಮನೆಯವರಿಗೆ ಕೇಡುಂಟಾಗುವುದು.

**66. ಕಾಗೆ ಮುಟ್ಟಿದರೆ :**
ಅನಿಷ್ಟ ಪ್ರಾಪ್ತಿಯಾಗುವುದು.

**67. ಕಾಗೆ ತಲೆ ಮೇಲೆ ಕೂತರೆ :**
ಕಷ್ಟಗಳು ಪ್ರಾಪ್ತಿಯಾಗುವವು.

**68. ಕಾಗೆ ತಲೆ ಮೇಲೆ ಹೇತರೆ :**
ವಿಪತ್ತು ಬರುವುದು.

**69. ಕಾಗೆ ಕುಕ್ಕಿದರೆ**
ದರಿದ್ರತೆ ಬರುವುದು.

70. **ಕಾಗೆಗಳು ಗುಂಪುಗೂಡಿ ಮನೆಯ ಮೇಲೆ ಕೂತು ಅತ್ತರೆ :**
ಮನೆಗೆ ಕೇಡುಂಟಾಗುವುದು.

71. **ದಾರಿಯಲ್ಲಿ ಹೋಗುವಾಗ ಗರುಡ ಪಕ್ಷಿ ಎಡ ಭಾಗದಿಂದ ಬಲ ಭಾಗಕ್ಕೆ ಹಾರಿಹೋದರೆ :**
ಎಲ್ಲಾ ರೀತಿಯಿಂದಲೂ ಕೆಟ್ಟದ್ದೇ ಆಗುವುದು. ಯಾವ ಕಾರ್ಯವೂ ಸಫಲವಾಗುವುದಿಲ್ಲ.

72. **ಬೆಕ್ಕು ಅಡ್ಡ ಬಂದರೆ :**
ಕಾರ್ಯ ಹಾನಿಯಾಗುವುದು.

73. **ಬೆಕ್ಕು ಅಪ್ರದಕ್ಷಿಣವಾಗಿ ಸುತ್ತಿಕೊಂಡು ಬಂದರೆ :**
ಅತಿಯಾಗಿ ಕೇಡಾಗುವುದು.

74. **ಬೆಕ್ಕು ಜಗಳವಾಡುವುದನ್ನು ನೋಡಿದರೆ :**
ಮನೆಯಲ್ಲಿ ಜಗಳವಾಗುವುದು.

75. **ಬೆಕ್ಕುಗಳ ಸಂಭೋಗವನ್ನು ನೋಡಿದರೆ :**
ಕೂಡಿಟ್ಟ ಹಣವು ನಾಶವಾಗಿ ಹೋಗುವುದು.

76. **ಬೆಕ್ಕು ಮಲಮೂತ್ರ ವಿಸರ್ಜಿಸುವುದನ್ನು ನೋಡಿದರೆ :**
ರೋಗ ಪ್ರಾಪ್ತಿಯಾಗುವುದು.

77. **ಕಾರ್ಯಗಳನ್ನು ಮಾಡುವಾಗ ಅಥವಾ ಆಲೋಚಿಸುವಾಗ ಒಂಟಿ ಸೀನು ಯಾರಾದರೂ ಸೀನಿದರೆ :**
ಆ ಕಾರ್ಯವು ಸಫಲವಾಗುವುದಿಲ್ಲ.

78. **ಕಾರ್ಯಗಳನ್ನು ಮಾಡುವಾಗ ಅಥವಾ ಆಲೋಚಿಸುವಾಗ ಮೂರು ಸೀನು ಸೀನಿದರೆ :**
ಕೆಲಸವು ಕೈಗೂಡುವುದಿಲ್ಲ.

79. **ಪುರುಷರ ಬಲಗಣ್ಣ ಮೇಲ್ಭಾಗದ ಎಡಗಡೆ ನರ ಹಾರಿದರೆ :**
ನಷ್ಟ ಉಂಟಾಗುತ್ತದೆ.

**80. ಪುರುಷರ ಹುಬ್ಬು ಅಥವಾ ಹುಬ್ಬಿನ ಕೆಳಗಡೆ ನರ ಹಾರಿದರೆ :**
ಹಾನಿಯುಂಟಾಗುತ್ತದೆ.

**81. ಸ್ತ್ರೀಯರ ಬಲಗಣ್ಣಿನ ಮೇಲ್ಭಾಗ ಬಲರೆಪ್ಪೆಯು ಹಾರಿದರೆ :**
ನಷ್ಟ ಉಂಟಾಗುತ್ತದೆ.

**82. ಸ್ತ್ರೀಯರ ಎಡರೆಪ್ಪೆ ಹಾರಿದರೆ :**
ವಿಪತ್ತು ಉಂಟಾಗುತ್ತದೆ.

**83. ಸ್ತ್ರೀ ಪುರುಷರ ಎಡಭುಜ ಹಾರಿದರೆ :**
ದ್ರವ್ಯ ನಷ್ಟವಾಗುವುದು. ಚಿಂತೆ ಆವರಿಸುವುದು.

**84. ಸ್ತ್ರೀ ಪುರುಷರ ಎದೆ ಹಾರಿದರೆ :**
ಶತ್ರುಗಳ ಭಯ ತಲೆದೋರುವುದು.

**85. ಸ್ತ್ರೀ ಪುರುಷರ ಬಲ ಮೊಲೆ ಹಾರಿದರೆ :**
ಬಂಧುಗಳಿಗೆ ದುಃಖ ಉಂಟಾಗುವುದು.

**86. ಸ್ತ್ರೀ ಪುರುಷರ ಹೊಟ್ಟೆ ನರ ಹಾರಿದರೆ :**
ರೋಗ ಪ್ರಾಪ್ತಿಯಾಗುವುದು.

**87. ಸ್ತ್ರೀ ಪುರುಷರ ಎಡ ಮೊಣಕಾಲು ಹಾರಿದರೆ :**
ಗಂಡಾಂತರ ಸಂಭವಿಸುವುದು.

**88. ಸ್ತ್ರೀ ಪುರುಷರ ಎಡದ ತುಟಿ ಒಂದೇ ಸಾರಿ ಹಾರಿದರೆ :**
ಗಂಡಾಂತರ ಸಂಭವಿಸುವುದು.

**89. ಸ್ತ್ರೀ ಪುರುಷರ ಬಲ ಭುಜ ಹಾರಿದರೆ :**
ಬಂಧುಗಳೊಡನೆ ಕಲಹ ಉಂಟಾಗುತ್ತದೆ.

**90. ಹಲ್ಲಿಯು ತಲೆಯ ಮೇಲೆ ಬಿದ್ದರೆ :**
ಕಲಹ ಉಂಟಾಗುತ್ತದೆ.

**91. ಹಲ್ಲಿ ನಡುನೆತ್ತಿಯ ಮೇಲೆ ಬಿದ್ದರೆ :**
ತಂದೆ-ತಾಯಿ ಹಾಗೂ ಗುರುಹಿರಿಯರಿಗೆ ಕಷ್ಟವು ಪ್ರಾಪ್ತಿಯಾಗುತ್ತದೆ.

**92. ಹಲ್ಲಿ ತಲೆಯ ಬಲಭಾಗದಲ್ಲಿ ಬಿದ್ದರೆ :**
ತಮ್ಮಂದಿರಿಗೆ ಕಷ್ಟ ಬರುತ್ತದೆ.

**93. ಹಲ್ಲಿ ತಲೆಯ ಹಿಂಭಾಗದಲ್ಲಿ ಬಿದ್ದರೆ :**
ಅಪರಾಧ ಕಲಹ ಉಂಟಾಗುವುದು. ಸೋದರ ಮಾವನಿಗೆ ಕಷ್ಟವಾಗುವುದು.

**94. ಹಲ್ಲಿ ತುರುಬಿನ ಮೇಲೆ ಬಿದ್ದರೆ :**
ರೋಗಪೀಡೆ ಪ್ರಾಪ್ತಿಯಾಗುತ್ತದೆ.

**95. ಹಲ್ಲಿ ಬಲದ ಕೆನ್ನೆಯ ಮೇಲೆ ಬಿದ್ದರೆ :**
ಮರಣಾಂತಿಕ ಅಪಾಯ ಉಂಟಾಗುವುದು.

**96. ಹಲ್ಲಿ ಎಡದ ಕೆನ್ನೆಯ ಮೇಲೆ ಬಿದ್ದರೆ :**
ಹಾನಿ ಉಂಟಾಗುವುದು.

**97. ಹಲ್ಲಿ ಹಣೆಯ ಮೇಲೆ ಬಿದ್ದರೆ :**
ಮದುವೆ ಆದವನಿಗೆ ಹಾನಿಯಾಗುವುದು.

**98. ಹಲ್ಲಿ ಮುಂದಲೆಯ ಮೇಲೆ ಬಿದ್ದರೆ :**
ಸೋದರ ಮಾವಂದರಿಗೆ ಕಷ್ಟ ಒದಗುತ್ತದೆ.

**99. ಹಲ್ಲಿ ಎಡದ ಹುಬ್ಬಿನ ಮೇಲೆ ಬಿದ್ದರೆ :**
ವ್ಯಾಧಿ ಬರುತ್ತದೆ.

**100. ಹಲ್ಲಿ ಎಡಗಲ್ಲದ ಮೇಲೆ ಬಿದ್ದರೆ :**
ಕೇಡುಂಟಾಗುವುದು.

**101. ಹಲ್ಲಿ ಮೂಗಿನ ಮೇಲೆ ಬಿದ್ದರೆ :**
ಧನ ಹಾನಿಯಾಗುವುದು.

**102. ಹಲ್ಲಿ ಎಡಕಣ್ಣಿನ ಮೇಲೆ ಬಿದ್ದರೆ :**
ಹಾನಿ ಉಂಟಾಗುವುದು.

**103. ಹಲ್ಲಿ ನಡು ಮೂಗಿನ ಮೇಲೆ ಬಿದ್ದರೆ :**
ದಾರಿದ್ರ್ಯ ಬರುವುದು.

**104. ಹಲ್ಲಿ ತುದಿಮೂಗಿನ ಮೇಲೆ ಬಿದ್ದರೆ :**
ಮರಣ ಪ್ರಾಪ್ತಿಯಾಗುವುದು.

**105. ಹಲ್ಲಿ ಕೆಳದುಟಿಯ ಮೇಲೆ ಬಿದ್ದರೆ :**
ಕಲಹ ಉಂಟಾಗುವುದು.

**106. ಹಲ್ಲಿ ಗಲ್ಲದ ಮೇಲೆ ಬಿದ್ದರೆ :**
ಮರಣ ಸಂಭವಿಸುವುದು.

**107. ಹಲ್ಲಿ ಎಡದ ಮೀಸೆಯ ಮೇಲೆ ಬಿದ್ದರೆ :**
ಹಾನಿ ಉಂಟಾಗುವುದು.

**108. ಹಲ್ಲಿ ಬಲದ ಮೀಸೆಯ ಮೇಲೆ ಬಿದ್ದರೆ :**
ಹಾನಿ ಉಂಟಾಗುವುದು.

**109. ಹಲ್ಲಿ ಗಡ್ಡದ ಮೇಲೆ ಬಿದ್ದರೆ :**
ದೇಶತ್ಯಾಗ ಮಾಡಬೇಕಾಗುವುದು.

**110. ಹಲ್ಲಿ ಬಲದ ಕಪಾಲದ ಮೇಲೆ ಬಿದ್ದರೆ :**
ಸರ್ವನಾಶವಾಗುವುದು.

**111. ಹಲ್ಲಿ ಎಡದ ಭುಜದ ಮೇಲೆ ಬಿದ್ದರೆ :**
ಬಂಧು-ಬಾಂಧವರಿಗೆ ದುರಾದೃಷ್ಟ ಉಂಟಾಗುವುದು.

**112. ಹಲ್ಲಿ ಬಲದ ಕೊರಳಿಗೆ ಬಿದ್ದರೆ :**
ಮದುವೆಯಾಗಿರುವವರಿಗೆ ತೊಂದರೆ ಉಂಟಾಗುವುದು.

**113. ಹಲ್ಲಿ ಬಲದ ಮೊಳಕ್ಕೈಗೆ ಬಿದ್ದರೆ :**
ನಷ್ಟವಾಗುವುದು.

**114. ಹಲ್ಲಿ ಎಡದ ಮುಂಗೈ ಹಾಗೂ ಮೊಳಕೈ ನಡುವೆ ಬಿದ್ದರೆ :**
ರೋಗಗಳು ಪೀಡಿಸುವವು.

**115. ಹಲ್ಲಿ ಬಲದ ಅಂಗೈಗೆ ಬಿದ್ದರೆ :**
ಧನಹಾನಿಯಾಗುವುದು.

**116. ಹಲ್ಲಿ ಎಡಕ್ಕೆ ಬೆರಳುಗಳ ಒಳಭಾಗದಲ್ಲಿ ಬಿದ್ದರೆ :**
ಭಯದ ವಾತಾವರಣ ಏರ್ಪಡುವುದು.

**117. ಹಲ್ಲಿ ಬಲದ ಬೆರಳುಗಳ ಖಂಡಿಕೆಯ ಮೇಲೆ ಬಿದ್ದರೆ :**
ಚಿಂತೆ ಉತ್ಪನ್ನವಾಗುವುದು.

**118. ಹಲ್ಲಿ ಎಡದ ಅಂಗಾಲು ಮೇಲೆ ಬಿದ್ದರೆ :**
ನೀರಿನ ಕಂಟಕ ತಲೆದೋರುವುದು.

**119. ಹಲ್ಲಿ ಸ್ತ್ರೀಯ ಉಡುಗೆ ತೊಡುಗೆ ಮೇಲೆ ಬಿದ್ದರೆ :**
ಆಭರಣ ನಷ್ಟವಾಗುವುದು.

**120. ಹಲ್ಲಿ ಎಡಕ್ಕೆ ಬಿದ್ದು ಅಲ್ಲಿಂದ ಕೆಳಗೆ ಬಿದ್ದರೆ :**
ರೋಗಗಳು ಕಾಡಿಸುವವು.

**121. ಹಲ್ಲಿ ಬಲದಲ್ಲಿ ಬಿದ್ದು ಬಲಕ್ಕೆ ಇಳಿದರೆ :**
ಕಷ್ಟವು ಪ್ರಾಪ್ತಿಯಾಗುವುದು.

**122. ಹಲ್ಲಿ ಬಲದಲ್ಲಿ ಬಿದ್ದು ಎಡಕ್ಕೆ ಇಳಿದರೆ :**
ಕಷ್ಟದ ಜೊತೆಗೆ ರೋಗಗಳೂ ಕಾಡುವವು.

**123. ಹಲ್ಲಿ ಎಡದಲ್ಲಿ ಬಿದ್ದು ಬಲಕ್ಕೇರಿದರೆ :**
ಮರಣವಾರ್ತೆ ಕೇಳಬೇಕಾಗಿ ಬರುವುದು.

**124. ಹಲ್ಲಿ ಎಡದಿಂದ ಬಲಕ್ಕಿಳಿದರೆ :**
ಕಲಹ ಉಂಟಾಗುವುದು.

**125. ಹಲ್ಲಿ ಹಿಂಭಾಗದಲ್ಲಿ ಬಿದ್ದು ಹಿಂದಕ್ಕೆ ಏರಿ ಇಳಿದರೆ :**
ಬಡತನ ಪ್ರಾಪ್ತಿಯಾಗುವುದು.

**126. ಹಲ್ಲಿ ಬೆನ್ನಮೇಲೆ ಬಿದ್ದು ಮಂಡಿಯ ಮೇಲೇರಿ ಇಳಿದರೆ :**
ಕಲಹ ಉಂಟಾಗುವುದು.

**127. ಸತ್ತ ಹಲ್ಲಿಯು ಮೇಲೆ ಬಿದ್ದರೆ :**
ಇತರರ ಸಾವನ್ನು ಕಾಣುವನು ಅಥವಾ ಹೆಣವನ್ನು ಹೊರುವನು.

**128. ಹಲ್ಲಿಯು ಶರೀರದ ಮೇಲೆ ಮೂತ್ರ ಮಾಡಿದರೆ :**
ಚಿಂತೆ, ದುಃಖ ಬರುವುದು.

**129. ಹಲ್ಲಿಯು ಹೊಟ್ಟೆ ಮೇಲೆ ಮಾಡಿಕೊಂಡು ಬಿದ್ದರೆ :**
ರೋಗ ಉತ್ಪನ್ನವಾಗುವುದು.

**130. ಶನಿವಾರ, ಸೋಮವಾರ ಪೂರ್ವ ದಿಕ್ಕಿಗೆ ಪ್ರಯಾಣ ಮಾಡಿದರೆ :**
ಅಶುಭ ಉಂಟಾಗುವುದು.

**131. ಗುರುವಾರ ದಕ್ಷಿಣ ದಿಕ್ಕಿಗೆ ಪ್ರಯಾಣ ಮಾಡಿದರೆ :**
ಅನರ್ಥ ಸಂಭವಿಸುವುದು.

**132. ಭಾನುವಾರ, ಶುಕ್ರವಾರ ಪಶ್ಚಿಮಕ್ಕೆ ಪ್ರಯಾಣ ಮಾಡಿದರೆ :**
ಕೇಡು ಸಂಭವಿಸುವುದು.

**133. ಬುಧವಾರ, ಮಂಗಳವಾರ ಉತ್ತರಕ್ಕೆ ಪ್ರಯಾಣ ಮಾಡಿದರೆ :**
ಅಶುಭ ಉಂಟಾಗುವುದು.

**134. ಪ್ರಯಾಣ ಮಾಡುವಾಗ ಕ್ಷೌರಿಕ ಎದುರಾಗಿ ಬಂದರೆ :**
ಅಶುಭ ವಾರ್ತೆ ಕೇಳಲು ಲಭ್ಯವಾಗುವುದು. ಅನಿರೀಕ್ಷಿತ ಧನಹಾನಿ ಉಂಟಾಗುವುದು. ಮಿತ್ರರು ಶತ್ರುಗಳಾಗುವರು. ಆರೋಗ್ಯ ಹದಗೆಡುವುದು. ರಾಜಕಾರಣಿಗಳಿಗೆ, ಸರ್ಕಾರಿ ನೌಕರರಿಗೆ ಅಪಕೀರ್ತಿ ದೊರಕುವುದು. ವ್ಯಾಪಾರಿಗಳಿಗೆ ವಿಪರೀತ ನಷ್ಟವುಂಟಾಗುವುದು.

**135. ಪ್ರಯಾಣ ಮಾಡುವಾಗ ಬೊಕ್ಕತಲೆಯವರು ಎದುರಾದರೆ :**
ನಿಶ್ಚಯಿಸಿಕೊಂಡ ಕಾರ್ಯ ಹಾಳಾಗುವುದು, ಆಸ್ತಿ ನಷ್ಟ ಉಂಟಾಗುವುದು. ಎಲ್ಲರ ನಿಂದನೆಗೆ ಗುರಿಯಾಗಬೇಕಾಗುವುದು, ಕೋರ್ಟಿನ ವ್ಯವಹಾರದಲ್ಲಿ ಅಪಜಯ ಉಂಟಾಗುವುದು. ಪರೀಕ್ಷೆಯಲ್ಲಿ ತೇರ್ಗಡೆಯಾಗುವುದಿಲ್ಲ. ವ್ಯಾಪಾರಿಗಳಿಗೆ ಒಂದಿಷ್ಟು ಲಾಭ ದೊರಕುವುದಿಲ್ಲ. ಕಾರ್ಮಿಕರಿಗೆ ಧನ ನಷ್ಟವಾಗುವುದು.

**136. ಪ್ರಯಾಣ ಮಾಡುವಾಗ ಖಾಲಿ ಬಿಂದಿಗೆ ಎದುರಾದರೆ :**

ಮನದ ಬಯಕೆಗಳು ಈಡೇರುವುದಿಲ್ಲ. ರೋಗ ಉಲ್ಬಣಿಸುವುದು. ಅಶುಭ ವಾರ್ತೆ ಕೇಳಲು ದೊರೆಯುವುದು. ಮಾನಹಾನಿಯಾಗುವುದು. ವ್ಯಾಪಾರದಲ್ಲಿ ಬಹಳಷ್ಟು ನಷ್ಟ ಅನುಭವಿಸಬೇಕಾಗುವುದು. ಮಿತ್ರರು ಶತ್ರುಗಳಾಗುವರು.

**137. ಪ್ರಯಾಣ ಮಾಡುವಾಗ ಮೊಲ ಕಂಡುಬಂದರೆ :**

ಪ್ರಯಾಣದಲ್ಲಿ ವಿಘ್ನಗಳು ಎದುರಾಗುವವು. ರೋಗಪ್ರಾಪ್ತಿ ಆಗುವುದು. ಧನಹಾನಿಯಾಗುವುದು. ಆಸ್ತಿ ನಷ್ಟವಾಗುವುದು. ಅಶುಭವಾರ್ತೆ ಕೇಳಲು ದೊರೆಯುವುದು. ಜೀವನದ ನಿರುತ್ಸಾಹ ಚಿಂತೆ ಮೂಡುವುದು.

**138. ಪ್ರಯಾಣ ಮಾಡುವಾಗ ಕೆಂಜಡೆಯವಳು ಎದುರಾದರೆ :**

ನೆನೆಸಿದ ಕಾರ್ಯಗಳು ಒಂದೂ ಕೈಗೂಡುವುದಿಲ್ಲ. ವೃಥಾ ಖರ್ಚು ಬರುವುದು. ಲಾಟರೀಲಿ ಬಹಳ ನಷ್ಟವಾಗುವುದು. ವ್ಯಾಪಾರಿಗಳಿಗೆ ಬಹಳ ನಷ್ಟವುಂಟಾಗುವುದು. ಕೋರ್ಟ್ ವ್ಯವಹಾರದಲ್ಲಿ ಅಪಜಯ ವಾಗುವುದು.

**139. ಪ್ರಯಾಣ ಮಾಡುವಾಗ ನರಿ ಬಲದಿಂದ ಎಡಕ್ಕೆ ಹಾದು ಹೋದರೆ :**

ಅಶುಭ ವಾರ್ತೆ ಕೇಳಲು ದೊರೆಯುವುದು. ಧನನಷ್ಟವಾಗುವುದು. ಸಂಬಂಧಿಕರೊಡನೆ ಕಲಹ ಉಂಟಾಗುವುದು. ರಾಜಕಾರಣಿಗಳಿಗೆ ಅಪಕೀರ್ತಿ ಉಂಟಾಗುವುದು. ರೋಗಗಳು ಕಾಡುವುವು. ಮುದ್ದೆಯನ್ನು ಕಳೆದುಕೊಳ್ಳಬೇಕಾಗಿ ಬರುವುದು. ಪ್ರಯತ್ನಿಸಿದ ಕಾರ್ಯಗಳೆಲ್ಲಾ ಹಾಳಾಗುವವು. ಶತ್ರುಗಳದೇ ಮೇಲುಗೈ ಆಗುವುದು.

**140. ಪ್ರಯಾಣ ಮಾಡುವಾಗ ಸುಳಿ ಗಾಳಿ ಎದ್ದರೆ :**

ಪ್ರಯಾಣ ಹಿತಕರವಾಗಿರುವುದಿಲ್ಲ. ಅಪಾಯಗಳು ಎದುರಾಗುತ್ತವೆ. ಮನದ ಬಯಕೆಗಳು ಒಂದೂ ಈಡೇರುವುದಿಲ್ಲ. ವ್ಯಾಪಾರದಲ್ಲಿ ಹಣ

ನಷ್ಟವಾಗುವುದು. ಮಿತ್ರರು ಶತ್ರುಗಳಾಗುತ್ತಾರೆ. ಅಶುಭ ವಾರ್ತೆಗಳು ಕೇಳಲು ದೊರೆಯುವುದು. ಕೋರ್ಟ್ ವ್ಯವಹಾರದಲ್ಲಿ ಸೋಲುಂಟಾಗುವುದು. ರೋಗಗಳು ಪೀಡಿಸುವವು.

----

## ಕಾಗೆ ಮನೆ ಪ್ರವೇಶಿಸಿದ್ದಕ್ಕೆ ಶಾಂತಿ

ಕಾಗೆಯು ಮನೆಯನ್ನು ಪ್ರವೇಶಿಸಿದರ 6 ತಿಂಗಳು ಮನೆಯನ್ನು ಬಿಡಬೇಕು.

----

## ಹಲ್ಲಿ ಬಿದ್ದ ದೋಷ ಪರಿಹಾರ

ತಣ್ಣೀರಿನಲ್ಲಿ ಸ್ನಾನ ಮಾಡಿ ಇಷ್ಟ ದೇವರಿಗೆ ತುಪ್ಪದಿಂದ ದೀಪ ಹಚ್ಚಿ ಗಂಧ ಪುಷ್ಪದಿಂದ ಪೂಜೆಯನ್ನು ಮಾಡಿ ದೀರ್ಘದಂಡ ನಮಸ್ಕಾರ ಮಾಡಿ ಪೀಡಾಪರಿಹಾರ ಮಾಡಬೇಕೆಂದು ಪ್ರಾರ್ಥಿಸಬೇಕು ಮತ್ತು ಭಾನುವಾರ ಬಿದ್ದರೆ ಮೊಸರನ್ನ, ಸೋಮವಾರ ಕ್ಷೀರಾನ್ನ, ತೈಲ ಪದಾರ್ಥ, ಮಂಗಳವಾರ ಚಿತ್ರಾನ್ನ, ಬುಧವಾರ ಗೋಧಿ ಪದಾರ್ಥ, ಗುರುವಾರ ಪಾಯಸ, ಶುಕ್ರವಾರ ದೋಸೆ, ಶನಿವಾರ ಶಾಲ್ಯಾನ್ನವನ್ನು ದೇವರಿಗೆ ನೈವೇದ್ಯ ಮಾಡಿ ಭುಂಜಿಸಬೇಕು.

ಕಂಚಿಯಲ್ಲಿ ಚಿನ್ನದ ಹಲ್ಲಿ ಮತ್ತು ಬೆಳ್ಳಿಯ ಹಲ್ಲಿಯನ್ನು ದರ್ಶನ ಮಾಡಿದವರನ್ನು ಮಾತಾಡಿಸಿದರೆ ದೋಷ ಪರಿಹಾರವಾಗುವುದು.